# ಚಾವಡಿ



ಒಕ್ಕಲಿಗರ ಯಾನೆ ಗೌಡರ ಸೇವಾ ಸಂಘ, ಮಂಗಳೂರು

ರಜತ ಮಹೋತ್ಸವದ ಸ್ಮರಣ ಸಂಚಿಕೆ - 2003

# ಬೆಂವಡಿ

## ರಜತ ಮಹೋತ್ಸವದ ಸ್ಮರಣ ಸಂಚಿಕೆ


ಪ್ರಧಾನ ಸಂಪಾದಕರು

ದೇವಸ್ಯ ಮನೋಹರ





**ಒಕ್ಕಲಿಗರ ಯಾನೆ ಗೌಡರ ಸೇವಾ ಸಂಘ (ರಿ.)**

**ಚಿಲಿಂಬಿ, ಮಂಗಳೂರು - 575 006**

# ಒಸಾವಡಿ

ಒಕ್ಕಲಿಗರ ಯಾನೆ ಗೌಡರ ಸೇವಾ ಸಂಘ (ರಿ.) ಮಂಗಳೂರು
ಇದರ ರಜತ ಮಹೋತ್ಸವದ ಸ್ಮರಣ ಸಂಚಿಕೆ - 2003


ಪುಟಗಳು : **viii + 190**

ಪ್ರತಿಗಳು : **1,000**

ಅಭಿಪ್ರಾಯ ಹಾಗೂ ಹಕ್ಕುಗಳು ಆಯಾ ಲೇಖಕರದ್ದು

ಬೆಲೆ : ರೂ. **30.00**

ಮುಖಪುಟ ವಿನ್ಯಾಸ : ಮೋಹನ ಸೋನಾ

ಮುದ್ರಣ : ಮನೋರಮಾ ಆಫ್‌ಸೆಟ್ ಪ್ರಿಂಟರ್ಸ್
ನಂ.3-1-40(1) ಕಮರ್ಷಿಯಲ್ ಬಿಲ್ಡಿಂಗ್,
ಬಿಜೈ, ಮಂಗಳೂರು - 575 004
ಫೋನ್ : 222683 (O), 222685 (F)

ಪ್ರಕಾಶನ : ಗೌಡರ ಸಮ್ಮೇಳನ ಸಮಿತಿ
ಒಕ್ಕಲಿಗರ ಯಾನೆ ಗೌಡರ ಸೇವಾ ಸಂಘ (ರಿ.)
ಚಿಲಿಂಬಿ, ಮಂಗಳೂರು - **575 006**

# *ಚಾವಡಿಯಲ್ಲಿ ನಿಮ್ಮೊಂದಿಗೆ.....*

*ಪ್ರಿಯ ಬಾಂಧವರೇ,*

**ಒಕ್ಕಲಿಗರ ಯಾನೆ ಗೌಡರ ಸೇವಾ ಸಂಘ, ಮಂಗಳೂರು ಇದರ ಬೆಳ್ಳಿ ಹಬ್ಬ ಆಚರಣೆಯ ಸಂದರ್ಭದಲ್ಲಿ ಶ್ರೀ ಶ್ರೀ ಶ್ರೀ ಬಾಲಗಂಗಾಧರನಾಥ ಮಹಾಸ್ವಾಮಿಗಳ ಐವತ್ತೆಂಟನೆಯ ಜನ್ಮ ವರ್ಧಂತ್ಯುತ್ಸವ ಹಾಗೂ ಬೆಳ್ಳಿ ತುಲಾಭಾರ ಮತ್ತು ಗೌಡರ ಬೃಹತ್ ಸಮಾವೇಶವನ್ನು ಜನವರಿ 19-2003 ರಂದು ಜಿಲ್ಲಾ ಕೇಂದ್ರ ಮಂಗಳೂರಿನಲ್ಲಿ ಆಯೋಜಿಸಲಾಗಿದೆ.**

ಪರಂಪರೆ ಮತ್ತು ಆಧುನಿಕ ಚಿಂತನ ವಿನ್ಯಾಸಗಳ ಸಮನ್ವಯಕಾರರಾದ ಮಹಾಚೇತನ ಶ್ರೀ ಶ್ರೀ ಶ್ರೀ ಸ್ವಾಮೀಜಿಯವರನ್ನು ಗೌರವದಿಂದ ಮಂಗಳೂರಿಗೆ ಬರಮಾಡಿಕೊಂಡು ಅವರ ಐವತ್ತೆಂಟನೆಯ ಹುಟ್ಟು ಹಬ್ಬವನ್ನು ಕರಾವಳಿ ವಲಯದ ಮಹಾಜನತೆಯ ಮುಂದೆ ಸಂತೋಷ ಸಂಭ್ರಮಗಳಿಂದ ಆಚರಿಸಬೇಕೆಂಬ ಸಂಕಲ್ಪವು ಸಂಘದ ಮುಂದಿದ್ದು, ಇದೀಗ ಕಾರ್ಯರೂಪದಲ್ಲಿದೆ. ಪ್ರಸ್ತುತ ಸಂದರ್ಭದಲ್ಲಿ ಡಾ.ಕೆ. ಚಿನ್ನಪ್ಪ ಗೌಡ ಇವರ ಸಂಪಾದಕತ್ವದಲ್ಲಿ 'ಗೌಡ ಜನಾಂಗ - ಇತಿಹಾಸ ಮತ್ತು ಸಂಸ್ಕೃತಿ' ಎಂಬ ಆಕರ ಗ್ರಂಥವನ್ನೂ ಮತ್ತು ಶ್ರೀ ದೇವಸ್ಯ ಮನೋಹರ ಇವರ ಪ್ರಧಾನ ಸಂಪಾದಕತ್ವದಲ್ಲಿ ರಜತ ಮಹೋತ್ಸವದ ಸ್ಮರಣ ಸಂಚಿಕೆಯನ್ನೂ ಸಿದ್ಧಪಡಿಸಲಾಗಿದೆ. ಈ ಸಂಚಿಕೆಗೆ '**ಚಾವಡಿ**' ಎಂಬ ಬಹುಮುಖ ಅರ್ಥವುಳ್ಳ ಶೀರ್ಷಿಕೆಯನ್ನು ಪ್ರಧಾನ ಸಂಪಾದಕರು ಸೂಚಿಸಿರುತ್ತಾರೆ.

'**ಚಾವಡಿ**' ಎಂದರೆ ಮನೆಯ ಆಯಕಟ್ಟಿನ ಜಾಗ. ಆಯದ ಮನೆಯೊಳಗೆ ಚಾವಡಿ ವಿಶಾಲವಾಗಿ ತೆರೆದ ಮನಸ್ಸಿನ ವಿಚಾರ ವಿನಿಮಯಗಳ, ಪಂಚಾಯತಿ ಸಭೆ ಸೇರುವ ಮಂಟಪ. ಮನೆಯ ಹೊರಗಿನ ಸಂಸ್ಕೃತಿಯನ್ನು ಮನೆಯೊಳಗಿನ ಚಾವಡಿಯಲ್ಲಿ ಕುಟುಂಬದ ಹಿರಿಯರ ಯಜಮಾನಿಕೆಯಲ್ಲಿ ಇತ್ಯರ್ಥ ಮಾಡುವ ಜಾಗ. ಮನೆಗೆ ನುಗ್ಗಿದ ಕೂಡಲೇ ಸಿಗುವುದು ಜಗಲಿ. ಜಗಲಿಯನ್ನು ದಾಟಿದರೆ ಚಾವಡಿ. ಚಾವಡಿ ದಾಟಿದರೆ ನಡುಮನೆ, ನಡುಮನೆಯಲ್ಲಿ 'ಕನ್ನಿಕಂಬ'ವಿರುತ್ತದೆ. ಚಾವಡಿ ಮತ್ತು 'ಕನ್ನಿಕಂಬ' ಗೌಡರ ಮನೆಯಲ್ಲಿ ಪವಿತ್ರ ಸ್ಥಳ. ಕನ್ನಿಕಂಬವೇ ಗೌಡರ ದೈವ - ದೇವರ ಸ್ಥಾನವನ್ನೂ ಪಡೆದಿದೆ. 'ಕನ್ನಿಕಂಬ' ಚಿತ್ರಣವನ್ನು ಮುಖಪುಟದಲ್ಲಿ ನೋಡಿರಿ.

'**ಚಾವಡಿ**' ಗೌಡರ ಮನೆಯ ಮಧ್ಯಂತರ ಜಗತ್ತೆಂದರೆ ತಪ್ಪಾಗಲಾರದು. ಜಗಲಿ ಚಾವಡಿಯಿಂದ ಒಂದು ಅಡಿ ತಗ್ಗಿನಲ್ಲಿರುತ್ತದೆ. ಚಾವಡಿಯಲ್ಲಿ ಕುಳಿತ ಯಜಮಾನರು ಮನೆಗೆ ಬಂದ ಅತಿಥಿಗಳನ್ನು ಏನು ಬಂದಿರೇ? ಹದುಳವಿದ್ದೀರೇ? ಎಂದು ಔಪಚಾರಿಕ ಪರಿಚಯ, ವ್ಯಕ್ತಿ ಪರಿಚಯ ಮಾಡಿಕೊಳ್ಳುತ್ತಾರೆ. ಅತಿಥಿಗಳ ಸಮಾಜ ಸೇವಾ ಕಾರ್ಯ, ಆದರ್ಶ ವ್ಯಕ್ತಿತ್ವ, ಜನಮನದ ನಾಯಕತ್ವಗಳನ್ನು ಮೆಚ್ಚಿಕೊಳ್ಳುತ್ತಾರೆ. ದಣಿವಿರದ ಧೀಮಂತರ ಬೆನ್ನುತಟ್ಟಿ, ಶಿಕ್ಷಕರಿಂದ ಮರಿಮಕ್ಕಳಿಗೆಲ್ಲಾ ಆದರ್ಶ ಶಿಕ್ಷಣ ಬಯಸುತ್ತಾರೆ. ಕವಿ ಹೃದಯಿಗಳನ್ನು ಚಾವಡಿಯಲ್ಲಿ ಕುಳ್ಳಿರಿಸಿ ಗೌರವಿಸುತ್ತಾರೆ. ನಾಟಿವೈದ್ಯರಿಂದ ಮನೆ ಮಂದಿಗೆಲ್ಲಾ ಆರೋಗ್ಯ ಬಯಸುತ್ತಾರೆ. ವಾಸ್ತು ತಜ್ಞರಿಂದ ಚಾವಡಿಯ ಆಯವನ್ನು ಸರಿಪಡಿಸುತ್ತಾರೆ. ಹೀಗೆ ಜನಾಂಗದ ಸಜ್ಜನರು, ಸಮಾಜ ಸೇವಕರು, ಕರ್ಮ ಜೀವಿಗಳು, ಭಯನಿವಾರಕರು, ವೈಜ್ಞಾನಿಕ ಕವಿಗಳು, ಇಂಜಿನಿಯರ್ ಕವಿಗಳನ್ನು ಕಂಡು ಕುಟುಂಬದ ಕುಲ ಗೌರವವನ್ನು ಬೆಳಗಿಸಿರೆಂದು ಹಾರೈಸುತ್ತಾರೆ.

**ಚಾವಡಿಯಲ್ಲಿ** ಕುಳಿತ ಯಜಮಾನರು ಪರಂಪರೆ ಮತ್ತು ಇತಿಹಾಸವನ್ನು ಕುಟುಂಬದ ಸದಸ್ಯರಿಗೆ ನೆನಪಿಸುತ್ತಾರೆ. ಗಂಗ, ಕಲಿಂಗರಿಂದ ತೊಡಗಿ ಕೆಂಪೇಗೌಡರ ವರೆಗೆ, ಪ್ರಸ್ತುತ ಶ್ರೀ ಎಚ್.ಡಿ. ದೇವೇಗೌಡ, ಶ್ರೀ ಎಸ್.ಎಂ. ಕೃಷ್ಣರ ವರೆಗೆ ಒಕ್ಕಲಿಗರ ಇತಿಹಾಸವನ್ನು ಹಾಡಿ ಹೊಗಳುತ್ತಾರೆ. ತುಳುನಾಡಿನ ಗೌಡರ ಇತಿಹಾಸ ಶಾಸನಗಳಲ್ಲೂ ಉಕ್ತವೆಂದು ನೆನಪಿಸುತ್ತಾರೆ. ಕುಟುಂಬದ ಸದಸ್ಯರು ಗೌಡ ಕನ್ನಡ ಭಾಷೆ, ತುಳು ಭಾಷೆ, ಸಂಸ್ಕೃತಿಗಳನ್ನು ಆಚರಣೆಯಲ್ಲಿಟ್ಟುಕೊಳ್ಳಬೇಕೆಂದು ಮನವಿ ಮಾಡುತ್ತಾರೆ. ಬದಲಾದ ಪರಿಸ್ಥಿತಿಯಲ್ಲಿ ಸಾಂಸ್ಕೃತಿಕ ವಿಘಟನೆಗೆ ಎಡೆ ಮಾಡಿಕೊಡಬಾರದೆಂದು ಸಾರಿ ಹೇಳುತ್ತಾರೆ. ಮದುವೆಯ ಶಾಸ್ತ್ರಗಳಲ್ಲಿ ವೀಳ್ಯ ಶಾಸ್ತ್ರವನ್ನು ಅಚ್ಚುಕಟ್ಟಾಗಿ, ಕ್ರಮಬದ್ಧವಾಗಿ ನೆರವೇರಿಸಬೇಕೆಂದು ಊರು ಗೌಡರಿಗೆ ತಾಕೀತು ಮಾಡುತ್ತಾರೆ.

**ಚಾವಡಿಯಲ್ಲಿ** ಗೌಡರ ಚಾರಿತ್ರ್ಯ, ರಾಜ ಶ್ರೇಷ್ಠತೆ, ಶಿಕ್ಷಣ ಮತ್ತು ಶಿಸ್ತುಗಳು, ನಂಬಿಕೆಗಳು, ಯುವ ಜನತೆಯ ಸಮಾಜಶಕ್ತಿ ಮತ್ತು ದೇಶದ ಅಭಿವೃದ್ಧಿಗೆ ಪೂರಕವಾದ ಚಿಂತನೆಗಳನ್ನು ಕುಟುಂಬದ ಸದಸ್ಯರೊಂದಿಗೆ ಊರ ಹಿರಿಯರೊಂದಿಗೆ ಚರ್ಚಿಸುತ್ತಾರೆ. ಚಾವಡಿಯಲ್ಲಿ ಕವಿಗೋಷ್ಠಿ ನಡೆಸುತ್ತಾರೆ. ಗೌಡ ಕನ್ನಡ, ತುಳು, ಕನ್ನಡ ಭಾಷೆಗಳಲ್ಲಿ ಕವಿತೆ ರಚಿಸಿ ಕುಟುಂಬದ ಸಹೃದಯ ಸದಸ್ಯರಿಗೆ ಕವಿಗಳು ಕಾಲ್ಪನಿಕ ರಸಾನುಭವವನ್ನು ಹಂಚುತ್ತಾರೆ. ಮಂಗಳೂರು, ಪುತ್ತೂರು, ಸುಳ್ಯ, ಬಂಟ್ವಾಳ, ಬೆಳ್ತಂಗಡಿ ಹಾಗೂ ಉಡುಪಿ, ಕಾರ್ಕಳ - ಹೀಗೆ ದೂರದೂರಿನ ಕುಲಬಾಂಧವರ ಸಂಘಟನೆಗಳ, ಸಾಧನೆಗಳ, ಯೋಜನೆಗಳ ವರದಿಯನ್ನು ಸದಸ್ಯರು ಚಾವಡಿಯ ಯಜಮಾನರಿಗೆ ಒಪ್ಪಿಸುತ್ತಾರೆ. ಒಟ್ಟಿನಲ್ಲಿ ಕುಟುಂಬವೆಂಬ ಸಂಸಾರ ಸೂತ್ರದ ಹಲವು ಮಜಲುಗಳನ್ನು; ಧರ್ಮ, ಅರ್ಥ, ಕಾಮ, ಮೋಕ್ಷಗಳೆಂಬ ಪುರುಷಾರ್ಥ ಸೂತ್ರಗಳನ್ನು ಚಾವಡಿಯಲ್ಲಿ ಯಜಮಾನರು ಕುಲಬಾಂಧವರೊಂದಿಗೆ ಹಂಚಿಕೊಳ್ಳುತ್ತಾರೆ.

ಹೀಗೆ 'ಚಾವಡಿ' - ಸ್ಮರಣ ಸಂಚಿಕೆಯಲ್ಲಿ ಬೇರೆ ಬೇರೆ ಶಿಸ್ತಿನ ಐವತ್ತಕ್ಕೂ ಹೆಚ್ಚು ಶೀರ್ಷಿಕೆಗಳನ್ನು ಸಂಪಾದಿಸಲಾಗಿದೆ. ನಮ್ಮ ಸಮಾಜದ ಸಂಸ್ಕೃತಿ, ಭಾಷೆ ಪರಿಚಯ ಇತ್ಯಾದಿ ವೈವಿಧ್ಯ ವಿಷಯಗಳನ್ನು ಸೇರಿಸಿಕೊಳ್ಳುವ ಯೋಜನೆಯಿದ್ದರೂ ಕಡಿಮೆ ಕಾಲಾವಕಾಶದಲ್ಲಿ ಕುಂಠಿತಗೊಂಡಿದೆ. ಆದರೂ ಹಿರಿಯ, ಕಿರಿಯ ಬರಹಗಾರ ಮಿತ್ರರು ನಮ್ಮ ಕೇಳಿಕೆಗೆ ಸ್ಪಂದಿಸಿ ಲೇಖನ, ಕವನ, ಭಾವಚಿತ್ರಗಳನ್ನು ನೀಡಿ ನಮ್ಮ ಕಾರ್ಯಕ್ಕೆ ಪ್ರೋತ್ಸಾಹಿಸಿದ್ದಾರೆ. ಎಲ್ಲರಿಗೂ ತುಂಬು ಹೃದಯದ ಕೃತಜ್ಞತೆಗಳು.

ಈ ಸಂಚಿಕೆಯ ಕುರಿತು ಸೂಕ್ತ ಸಮಯದಲ್ಲಿ ಮಾರ್ಗದರ್ಶನ ನೀಡಿರುವ **ಡಾ.ಕೆ. ಚಿನ್ನಪ್ಪ ಗೌಡರಿಗೆ** ನಮ್ಮ ನಮನಗಳು. 'ಚಾವಡಿ' ಎಂಬ ಅರ್ಥಪೂರ್ಣ ಮುಖ ಪುಟ ವಿನ್ಯಾಸಗೊಳಿಸಿರುವ ನಮ್ಮ ಸಮಾಜದ ಪ್ರಸಿದ್ಧ ಕಲಾವಿದರು **ಶ್ರೀ ಮೋಹನ ಸೋನಾ** ನಮ್ಮೆಲ್ಲರಿಂದ ಅಭಿನಂದನೀಯರು. ಈ ಸಂಚಿಕೆಗೆ ಜಾಹೀರಾತು ನೀಡಿ ಸಹಕರಿಸಿದ ಎಲ್ಲಾ ಹಿತೈಷಿಗಳಿಗೂ ಕೃತಜ್ಞತೆಗಳು. ಸೀಮಿತ ಅವಧಿಯೊಳಗೆ ಅಚ್ಚುಕಟ್ಟಾಗಿ ಪುಸ್ತಕವನ್ನು ವಿನ್ಯಾಸಗೊಳಿಸಿ ಮುದ್ರಿಸಿ ಕೊಟ್ಟಿರುವ ಮನೋರಮಾ ಆಫ್‌ಸೆಟ್ ಪ್ರಿಂಟರ್ಸ್‌ನ ಮಾಲಕ ಹಾಗೂ ಶ್ರಮಿಸಿದ ಎಲ್ಲಾ ಸಿಬ್ಬಂದಿ ವರ್ಗದವರಿಗೆ ಶ್ಲಾಘನೀಯ ವಂದನೆಗಳು. ಈ ಕಾರ್ಯದಲ್ಲಿ ನಮ್ಮನ್ನು ತೊಡಗಿಸಿಕೊಳ್ಳಲು ಸದಾವಕಾಶವನ್ನು ಒದಗಿಸಿಕೊಟ್ಟಿರುವ ಗೌಡರ ಸಮ್ಮೇಳನ ಸಮಿತಿಯ ಪದಾಧಿಕಾರಿಗಳಿಗೆ ವಂದನೆಗಳು.

ಈ 'ಚಾವಡಿ' ಸ್ಮರಣ ಸಂಚಿಕೆ ನಿಮ್ಮದು. ತಪ್ಪುಗಳನ್ನು ಒತ್ತಟ್ಟಿಗಿಟ್ಟು, 'ಹಂಸಕ್ಷೀರ' ನ್ಯಾಯದಂತೆ ಸ್ವೀಕರಿಸಿ ಪ್ರಯತ್ನಕ್ಕೆ ಪ್ರೋತ್ಸಾಹಿಸುತ್ತೀರೆನ್ನುವ ಭರವಸೆ ನಿಮ್ಮ ಮೇಲಿರಿಸಿದ್ದೇವೆ. ಗೌಡರ ಸಮಾವೇಶದ ನೆನಪಿನ ಸಂಚಿಕೆ ನಮ್ಮ - ನಿಮ್ಮ ಮನದಲ್ಲಿ ಆದರಾಭಿಮಾನದಿಂದ ಇರಲಿ.

ದಿನಾಂಕ : 19-01-2003

ಸಂಪಾದಕ ಸಮಿತಿ

# ಸಂಪಾದಕ ಸಮಿತಿ

ಗೌರವ ಸಂಪಾದಕರು

ಡಾ. ಕೆ. ಚಿನ್ನಪ್ಪ ಗೌಡ

ಪ್ರಧಾನ ಸಂಪಾದಕರು

ದೇವಸ್ಯ ಮನೋಹರ

ಸಂಪಾದಕರು

ಡಾ. ವಿಶ್ವನಾಥ ಬದಿಕಾನ

ಡಾ. ಜಿ.ಪಿ. ಶಿವರಾಂ

ಡಿ. ಯದುಪತಿ ಗೌಡ

ಪಿ. ವಾಸುದೇವ ಗೌಡ

## ಒಳಪುಟಗಳಲ್ಲಿ.....

# ಚಿಂತನೆಯ ಕುಡಿಗಳೇ ಮೂಡಿ ಬನ್ನಿ

ಸ್ವಾಗತವು ನಿಮಗೆಲ್ಲ - ಸುಸ್ವಾಗತ....

ಓ ಬನ್ನಿ ಒಕ್ಕೊರಳ ದನಿಯಾಗಿ ಒಕ್ಕಲಿಗ
ಗೌಡ ಜನ ಹಿರಿಕಿರಿಯ ಬಂಧು ಭಗಿನಿಯರೆ
ತೆಂಕ ಕನ್ನಡ ಜಿಲ್ಲಾ ಮಂಗಳೂರು ಮೊತ್ತ
ಮೊದಲ ಸಂಮೇಳನಕೆ ಸ್ವಾಗತವು ನಿಮಗೆ

ಪಡುಗಡಲ ತೆರೆಗೈಗಳಿಂದ ಕರೆ ನೀಡುತಿವೆ
ಕುಮಾರಧಾರಾ ನೇತ್ರ ಪಯಸ್ವಿನಿಯರ
ಮೂಡ ಮಲೆನಾಡ ಗಿರಿ ಬಯಲ ಹಳ್ಳಿಗಳಿಂದ
ಕೂಡಿ ಬನ್ನಿರಿ ಎನುತ ಸಮಾಜ ಬಾಂಧವರ

ಆದಿ ಚುಂಚನಗಿರಿಯ ಶ್ರೀ ಭೈರವ ಜ್ಯೋತಿ
ಬೆಳಗುತಿದೆ ತುಳುನಾಡ ಬೆಳಕ ನೀಡಿ
ಅಮರ ಕಲ್ಯಾಣ ಕ್ರಾಂತಿಗೆ ದುಡಿದು ಹೆಸರಾದ
ಗೌಡ ಜನ ಹುತಾತ್ಮರ ನೆನಪು ಮಾಡಿ

ಜಾತಿ ಮತ ಪಂಥ ಪಂಗಡ ಸಾಮರಸ್ಯದಲಿ
ಗೌಡ ನಡೆ ನುಡಿ ಸಂಸ್ಕೃತಿಯು ಮೆರೆಯಲಿ
ಅನ್ಯರನುಸರಣೆ ಸಾಕಿನ್ನು ಸ್ವಂತಿಕೆ ಚಿಗುರಿ
ಮುಕ್ತ ಯುವಜನ ಬಾಳು ತಲೆಯೆತ್ತಲಿ

ದೇಶ ಸೇವೆಯ ವಿವಿಧ ಸ್ತರಗಳಲಿ ಹೊಣೆ ಹೊರಲು
ಗೌಡರೊಕ್ಕೂಟವಿದು ಮುಡಿಪಾಗಲಿ
ಆಚರಣೆಯಿಂದಲೀ ಸಂಮೇಳನದ ಸಾರ್ಥಕ್ಯ
ಹೊಸ ಚಿಂತನೆಯ ಕುಡಿಗಳೇ ಮೂಡಿ ಬನ್ನಿ

✍ ಟಿ.ಜಿ. ಮುಡೂರು

## ಜಗದ್ಗುರು ಶ್ರೀಶ್ರೀಶ್ರೀ ಬಾಲಗಂಗಾಧರನಾಥ ಸ್ವಾಮೀಜಿಯವರು

ಪೀಠಾಧ್ಯಕ್ಷರು, ಶ್ರೀ ಆದಿಚುಂಚನಗಿರಿ ಮಹಾಸಂಸ್ಥಾನ



ಇವರು ಆಶೀರ್ವದಿಸಲಿರುವರು

ಶ್ರೀಶ್ರೀಶ್ರೀ ಧರ್ಮಪಾಲನಾಥ ಸ್ವಾಮೀಜಿ

ಶ್ರೀ ಆದಿಚುಂಚನಗಿರಿ ಮಹಾಸಂಸ್ಥಾನ ಶಾಖಾಮಠ, ಮಂಗಳೂರು



# ಶ್ರೀ ಕುರುಂಜಿ ವೆಂಕಟ್ರಮಣ ಗೌಡ, ಸುಳ್ಯ



ಇವರು ಸಮ್ಮೇಳನದ ಅಧ್ಯಕ್ಷತೆ ವಹಿಸಲಿರುವರು



## ಶ್ರೀ ಡಿ. ವೀರೇಂದ್ರ ಹೆಗ್ಗಡೆ
ಧರ್ಮಾಧಿಕಾರಿಗಳು, ಶ್ರೀಕ್ಷೇತ್ರ, ಧರ್ಮಸ್ಥಳ

# ಸಂದೇಶ

ಮಂಗಳೂರಿನ ಒಕ್ಕಲಿಗರ ಯಾನೆ ಗೌಡರ ಸೇವಾ ಸಂಘವು 25 ವರ್ಷಗಳ ಸಾರ್ಥಕ ಸಮಾಜ ಸೇವೆಯನ್ನು ಸಲ್ಲಿಸಿದ್ದು ಸಂಘದ ಬೆಳ್ಳಿಹಬ್ಬವನ್ನು ಆಚರಿಸಲಿರುವ ವಿಚಾರ ತಿಳಿದು ಸಂತೋಷವಾಯಿತು.

ಈ ಸಂದರ್ಭದಲ್ಲಿ ಶ್ರೀ ಆದಿಚುಂಚನಗಿರಿ ಮಹಾಸಂಸ್ಥಾನ ಮಠದ ಪೀಠಾಧಿಕಾರಿಗಳಾದ ಶ್ರೀ ಶ್ರೀ ಬಾಲಗಂಗಾಧರನಾಥ ಸ್ವಾಮೀಜಿಯವರ ಐವತ್ತೆಂಟನೆ ಜನ್ಮ ವರ್ಧಂತ್ಯುತ್ಸವ, ಬೆಳ್ಳಿ ತುಲಾಭಾರ ಹಾಗೂ ಗೌಡರ ಬೃಹತ್ ಸಮ್ಮೇಳನವನ್ನು ಹಮ್ಮಿಕೊಂಡಿರುವುದು ಶ್ಲಾಘನೀಯವಾಗಿದೆ.

ಗೌಡ ಜನಾಂಗದ ಸಾಮರಸ್ಯ, ಸೌಹಾರ್ದತೆ, ಸಾಮಾಜಿಕ, ಶೈಕ್ಷಣಿಕ, ಆರ್ಥಿಕ ಹಾಗೂ ಸಾಂಸ್ಕೃತಿಕ ಅಭಿವೃದ್ಧಿಯನ್ನು ಸಾಧಿಸುವಲ್ಲಿ ಈ ಸಮ್ಮೇಳನವು ಯಶಸ್ವಿಯಾಗಲೆಂದು ಆಶಿಸುತ್ತೇನೆ.

ಬೆಳ್ಳಿಹಬ್ಬದ ಸವಿನೆನಪಿಗಾಗಿ ಆಕರ ಗ್ರಂಥ ಹಾಗೂ ಸ್ಮರಣ ಸಂಚಿಕೆ ಪುಸ್ತಕಗಳನ್ನು ಹೊರತರಲಿರುವುದು ಔಚಿತ್ಯಪೂರ್ಣವಾಗಿದೆ. ಗೌಡ ಸಮಾಜದ ಇತಿಹಾಸ, ಪರಂಪರೆ ಹಾಗೂ ಸಂಸ್ಕೃತಿಯನ್ನು ಪರಿಚಯಿಸಬಲ್ಲ ವಿವಿಧ ವೈಚಾರಿಕ ಲೇಖಗಳಿಂದೊಡಗೂಡಿ ಪುಸ್ತಕಗಳು ಆಕರ್ಷಕವಾಗಿ ಪ್ರಕಟವಾಗಲೆಂದು ಹಾರೈಸುತ್ತೇನೆ.

ಈ ದಿಸೆಯಲ್ಲಿ ನಿಮ್ಮೆಲ್ಲ ಪ್ರಯತ್ನ-ಪರಿಶ್ರಮ ಸಫಲವಾಗುವಂತೆ ಶ್ರೀ ಮಂಜುನಾಥ ಸ್ವಾಮಿ ಹರಸಲೆಂದು ಪ್ರಾರ್ಥಿಸುತ್ತೇನೆ.

✍ ಡಾ. ವೀರೇಂದ್ರ ಹೆಗ್ಗಡೆಯವರು



ಮಣ್ಣಿನ ಮಗ

ಶ್ರೀ ಹೆಚ್.ಡಿ. ದೇವೇಗೌಡರು

ಭಾರತದ ಮಾಜಿ ಪ್ರಧಾನ ಮಂತ್ರಿಗಳು



ಶ್ರೀ ಎಸ್.ಎಂ. ಕೃಷ್ಣ
ಮಾನ್ಯ ಮುಖ್ಯಮಂತ್ರಿಗಳು, ಕರ್ನಾಟಕ ಸರ್ಕಾರ



ಶ್ರೀ ಕೆ. ಕಡಿದಾಳ್ ಮಂಜಪ್ಪನವರು

ಮಾಜಿ ಮುಖ್ಯಮಂತ್ರಿಗಳು ಕರ್ನಾಟಕ ಸರಕಾರ

# ಸಮ್ಮೇಳನದ ಪದಾಧಿಕಾರಿಗಳು



ಡಿ.ವಿ. ಸದಾನಂದ ಗೌಡ

*ಅಧ್ಯಕ್ಷರು*



ಸಿ.ಪಿ. ಜಯರಾಮ ಗೌಡ

*ಕಾರ್ಯಾಧ್ಯಕ್ಷರು*



ಯಂ.ಪಿ. ಉಮೇಶ

*ಖಜಾಂಜಿ*



ಕೆ. ಲೋಕಯ್ಯ ಗೌಡ

*ಪ್ರಧಾನ ಕಾರ್ಯದರ್ಶಿ*



ಬರೆಮೇಲು ಕರುಣಾಕರ ಗೌಡ

*ಪ್ರಧಾನ ಕಾರ್ಯದರ್ಶಿ*

# ಗೌರವ ಸದಸ್ಯರು



ಸೀತಾರಾಂ, ಕ್ಯಾಂಪ್ಕೊ



ಪಿ.ಎ. ಗಣಪತಿ



ಕೋದಂಡ ರಾಮೇ ಗೌಡ



ಬಿ.ಎಸ್. ಲೋಕೇಶ್ ಕುಮಾರ್



ರಾಮಲಿಂಗೇ ಗೌಡ



ಕೆ.ಕೆ. ಉಮೇಶ ಕುಮಾರ್

# ಸಮಿತಿಗಳ ಅಧ್ಯಕ್ಷರುಗಳು



**ಯಂ. ಪಿ. ಉಮೇಶ**
*ಅಧ್ಯಕ್ಷರು, ಹಣಕಾಸು ಸಮಿತಿ*



**ಯನ್.ಎ. ರಾಮಚಂದ್ರ**
*ಅಧ್ಯಕ್ಷರು, ಆಹಾರ ಸಮಿತಿ*



**ನಿತ್ಯಾನಂದ ಮುಂಡೋಡಿ**
*ಅಧ್ಯಕ್ಷರು, ಪ್ರಚಾರ ಸಮಿತಿ*



**ಯನ್.ಎಸ್. ನಾರಾಯಣ ಗೌಡ**
*ಅಧ್ಯಕ್ಷರು, ವಾಹನ ಸಮಿತಿ*



**ಡಾ. ಎಸ್. ನಾರಾಯಣ ಗೌಡ**
*ಅಧ್ಯಕ್ಷರು, ಆರೋಗ್ಯ ಸಮಿತಿ*



**ತಮ್ಮಣ್ಣ**
*ಅಧ್ಯಕ್ಷರು, ಭದ್ರತಾ ಸಮಿತಿ*



**ಪಿ. ವಾಸುದೇವ ಗೌಡ**
*ಅಧ್ಯಕ್ಷರು, ವೇದಿಕೆ ಸಮಿತಿ*



**ಡಾ.ಕೆ. ಚಿನ್ನಪ್ಪ ಗೌಡ**
*ಅಧ್ಯಕ್ಷರು, ಸ್ಮರಣ ಸಂಚಿಕೆ ಸಮಿತಿ*



**ರ[illegible]ವತಿ ಗೌಡ**
*ಅಧ್ಯಕ್ಷರು, [illegible] ಸಮಿತಿ*

# ಸಮಾವೇಶದ ಪ್ರಧಾನ ಸಂಚಾಲಕರು



**ಯನ್. ರಾಮಚಂದ್ರ ಗೌಡ**
*ಅಧ್ಯಕ್ಷರು, ಗೌಡರ ಸೇವಾ ಸಂಘ, ಮಂಗಳೂರು*



**ಕೆ.ಸಿ. ನಾರಾಯಣ**
*ಗೌಡರ ಯುವ ಸಂಘ, ಸುಳ್ಯ*



**ಇಡ್ಯಡ್ಕ ಮೋಹನ ಗೌಡ**
*ಒಕ್ಕಲಿಗರ ಸಂಘ, ಪುತ್ತೂರು*



**ಎಚ್. ಪದ್ಮ ಗೌಡ**



**ಪುರುಷೋತ್ತಮ**
*ಒಕ್ಕಲಿಗರ ಸಂಘ, ಉಡುಪಿ*



**ಎಸ್. ಕೆ. ಮಹದೇವೇ ಗೌಡ**



**ಲಿಂಗಪ್ಪ ಗೌಡ**
*ಒಕ್ಕಲಿಗರ ಸಂಘ,*



**ನಿತ್ಯಾನಂದ ಮುಂಡೋಡಿ**

# ಮೊದಲ ಮಹಾ ದಾನಿಗಳು



ಶ್ರೀಮಾನ್ ಹಳಸೆ ಬೈರೇ ಗೌಡ ಮತ್ತು ಶ್ರೀಮತಿ ಕೋಮಲಮ್ಮ ಬೈರೇ ಗೌಡ



ಶ್ರೀಮಾನ್ ಕೈಕುರೆ ರಾಮಣ್ಣ ಗೌಡ ಮರ್ದಾಳ ಮತ್ತು ಶ್ರೀಮತಿ ಎಸ್. ಆರ್. ಚಂದ್ರಾವತಿ

# ಆಡಳಿತ ಮಂಡಳಿ



ಎನ್. ರಾಮಚಂದ್ರ ಗೌಡ

*ಅಧ್ಯಕ್ಷರು*



ಎನ್. ಎಸ್. ನಾರಾಯಣ ಗೌಡ

*ಉಪಾಧ್ಯಕ್ಷರು*



ಕೆ. ಲೋಕಯ್ಯ ಗೌಡ

*ಕಾರ್ಯದರ್ಶಿ*



ಪಿ.ಯಸ್. ದೇವರಾಜ್

*ಕಾರ್ಯದರ್ಶಿ*



ಟಿ. ಮಂಜಪ್ಪ ಗೌಡ

*ಖಜಾಂಜಿ*



ಪಿ. ವಾಸುದೇವ ಗೌಡ



ಯಂ. ಸಂಜೀವ ಗೌಡ



ಕೆ. ಗಿರೀಶ



ಕೆ. ಧರ್ಮಪಾಲ ಗೌಡ



ಕೆ. ಸಿ. ಮಂಜುನಾಥ



ವಿ. ಬಿ. ಗೋವಿಂದೇ ಗೌಡ



ಕೆ. ಸಂಜೀವ ಗೌಡ



ಡಿ. ಪದ್ಮನಾಭ ಗೌಡ



ಡಿ.ಎಸ್. ಸುರೇಶ



ಕುಸುಮಾಧರ ಗೌಡ

# ಒಕ್ಕಲಿಗರ ಯಾನೆ ಗೌಡರ ಸಂಘದ ಅಧ್ಯಕ್ಷರುಗಳು



ಕೆ.ಬಿ. ಜನಾರ್ಧನ
1978 - 1982



ಪಿ. ಕೆ. ಸುಬ್ಬಯ್ಯ
1982 - 1986
1990 - 1993



ಡಾ. ಡಿ.ಎಸ್. ಶೇಷಪ್ಪ
1987-1990
1993-1995



ಡಿ.ಯಸ್. ಆನಂದ
1995-1999



ಪಿ. ವಾಸುದೇವ ಗೌಡ
1986-1987
1999-2000



ಎನ್. ರಾಮಚಂದ್ರ ಗೌಡ
2002 -

# ಒಕ್ಕಲಿಗರ ಯಾನೆ ಗೌಡರ ಸೇವಾ ಸಂಘದ ಕಾರ್ಯದರ್ಶಿಗಳು



ಡಾ. ಡಿ.ಎಸ್. ಶೇಷಪ್ಪ ಗೌಡ
*1978-1982*



ಬಿ.ಯಚ್. ವೆಂಕಪ್ಪ
*1982-1986*



ಕೆ. ಲೋಕಯ್ಯ ಗೌಡ
*1986-1987*
*1993-*



ಎಸ್. ಧನಂಜಯ
*1987-1989*



ಶ್ರೀ ಚೈತನ್ಯ
*1989-1990*



ಪಿ. ವಾಸುದೇವ ಗೌಡ
*1990-1993*



ವಾಸುದೇವ ಗೌಡ, ಪಳಂಗಾಯ

# ತಾಲೂಕು ಸಂಘಗಳ ಅಧ್ಯಕ್ಷರು ಮತ್ತು ಕಾರ್ಯದರ್ಶಿಗಳು



**ರಾಮಚಂದ್ರ ಗೌಡ**
*ಅಧ್ಯಕ್ಷರು, ಒಕ್ಕಲಿಗರ ಯಾನೆ ಗೌಡರ ಸಂಘ, ಮಂಗಳೂರು*



**ಲೋಕಯ್ಯ ಗೌಡ**
*ಕಾರ್ಯದರ್ಶಿ, ಒಕ್ಕಲಿಗರ ಯಾನೆ ಗೌಡರ ಸೇವಾ ಸಂಘ, ಮಂಗಳೂರು*



**ಲಿಂಗಪ್ಪ ಗೌಡ**
*ಅಧ್ಯಕ್ಷರು, ಗೌಡರ ಯಾನೆ ಒಕ್ಕಲಿಗರ ಸಂಘ, ಬಂಟ್ವಾಳ*



**ಕೆ.ಸಿ. ನಾರಾಯಣ ಗೌಡ**
*ಅಧ್ಯಕ್ಷರು, ಗೌಡ ಯುವ ಸಂಘ, ಸುಳ್ಯ*



**ಎಚ್. ಪದ್ಮ ಗೌಡ ಬೆಳಾಲು**
*ಅಧ್ಯಕ್ಷರು, ಗೌಡರ ಯಾನೆ ಒಕ್ಕಲಿರ ಸಂಘ, ಬೆಳ್ತಂಗಡಿ*



**ಪಿ. ದುಗ್ಗಪ್ಪ ಗೌಡ**
*ಕಾರ್ಯದರ್ಶಿ, ಗೌಡರ ಯಾನೆ ಒಕ್ಕಲಿಗರ ಸಂಘ, ಬೆಳ್ತಂಗಡಿ*



**ಇಡ್ಯಡ್ಕ ಮೋಹನ ಗೌಡ**
*ಅಧ್ಯಕ್ಷರು, ಒಕ್ಕಲಿಗ ಗೌಡ ಸಂಘ, ಪುತ್ತೂರು*



**ಚಿದಾನಂದ ಬೈಲಾಡಿ**
*ಕಾರ್ಯದರ್ಶಿ, ಒಕ್ಕಲಿಗ ಗೌಡ ಸಂಘ, ಪುತ್ತೂರು*



**ಪುರುಷೋತ್ತಮ**
*ಅಧ್ಯಕ್ಷರು, ಗೌಡರ ಯಾನೆ ಒಕ್ಕಲಿಗರ ಸಂಘ, ಉಡುಪಿ*



**ಎಸ್.ಕೆ. ಮಹದೇವಗೌಡ**
*ಸ್ಥಾಪಕ ಅಧ್ಯಕ್ಷರು, ಗೌಡರ ಯಾನೆ ಒಕ್ಕಲಿಗರ ಸಂಘ, ಕಾರ್ಕಳ*

# ಸಂಘಗಳ ಆಡಳಿತ ಸಮಿತಿ

ಗೌಡರ ಯಾನೆ ಒಕ್ಕಲಿಗರ ಸೇವಾ ಸಂಘ, ಬೆಳ್ತಂಗಡಿ



ಗೌಡರ ಯಾನೆ ಒಕ್ಕಲಿಗ ಸಂಘ, ಬಂಟ್ವಾಳ



ಉಡುಪಿ ಜಿಲ್ಲಾ ಒಕ್ಕಲಿಗ (ಗೌಡ)ರ ಸಂಘ



ಗೌಡರ ಯಾನೆ ಒಕ್ಕಲಿಗರ ಸೇವಾ ಸಂಘ, ಕಾರ್ಕಳ



ಗೌಡ ಸಮಾಜ (ರಿ) ಮುರ, ಪುತ್ತೂರು



ಒಕ್ಕಲಿಗ ಗೌಡರ ವಿದ್ಯಾರ್ಥಿ ಸಂಘ, ಮಂಗಳೂರು




## ತಾಲೂಕು ಸಂಘಗಳ ಅಧ್ಯಕ್ಷರು ಮತ್ತು ಕಾರ್ಯದರ್ಶಿಗಳು



ಟಿ. ಮಹಾಬಲ ಗೌಡ



ಕೆ. ಬಾಬು ಗೌಡ

ಅಧ್ಯಕ್ಷ (ಗೌಡ ಸಮಾಜ, ಮುರ) ಕಾರ್ಯದರ್ಶಿ



ಬಿ.ಎಂ. ಸುರೇಶ್

ಕಾರ್ಯದರ್ಶಿ, ಉಡುಪಿ



ಪುರುಷೋತ್ತಮ ಗೌಡ ಬಿ.

ಅಧ್ಯಕ್ಷ, ಕಾರ್ಕಳ



ಕೆ. ಎಸ್. [illegible]



## ಪೋಷಕರು


ಕುರುಂಜಿ ವೆಂಕಟ್ರಮಣ ಗೌಡ


ಡಿ. ವಿ. ಸದಾನಂದ ಗೌಡ


ಬಿ. ಕರುಣಾಕರ ಗೌಡ


ಎಂ. ಪಿ. ಉಮೇಶ್


ಸಿ.ಪಿ. ಜಯರಾಮ ಗೌಡ

## ಆರ್ಥಿಕ ಸಂಗ್ರಹಣೆಗೆ ವಿಶೇಷ ಸಹಕಾರ ನೀಡಿದವರು


ಎಚ್. ಪದ್ಮಗೌಡ


ಪಿ. ದುಗ್ಗಪ್ಪ ಗೌಡ


ಎನ್. ರಾಮಚಂದ್ರ ಗೌಡ


ಕೆ. ಸಂಜೀವ ಗೌಡ


ಕೆ. ಲೋಕಯ್ಯ ಗೌಡ


ಟಿ. ಮಂಜಪ್ಪ ಗೌಡ


ಡಿ. ಪದ್ಮನಾಭ ಗೌಡ


ಎನ್. ಶಿವರಾಮ ಗೌಡ


ಎನ್.ಎಸ್.ನಾರಾಯಣ ಗೌಡ


ಎ. ಪದ್ಮನಾಭ ಗೌಡ


ಕೆ. ಬಿ. ದಿನಕರ ಗೌಡ


ಸಿ. ಕೆ. ಶಶಿಧರ


ಕೈಕುರೆ ವೆಂಕಟ್ರಮಣ ಗೌಡ


ಪಿ. ವಾಸುದೇವ ಗೌಡ


ನಿತ್ಯಾನಂದ ಮುಂಡೋಡಿ


ಶ್ರೀಮತಿ ದೇವಕಿ ಅಚ್ಯುತ


ಶ್ರೀಮತಿ ಜಾನಕಿ ಬಾಲಕೃಷ್ಣ


ಶ್ರೀಮತಿ ಶಕುಂತಲ


ಸುಂದರ ಪಾರೆಪ್ಪಾಡಿ


ಜಿ. ವಾಸುದೇವ ಗೌಡ


ಯು.ಎಸ್. ಲಿಂಗಯ್ಯ


ಕೆ. ಧರ್ಮಪಾಲ ಗೌಡ


ಪಿ.ಬಿ. ಗೋವಿಂದೇ ಗೌಡ


ಕೆ. ಕೆ. ಉಮೇಶ್ ಕುಮಾರ್


ಕೋದಂಡರಾಮೇ ಗೌಡ


ಬಿ.ಸಿ. ಸದಾನಂದ ಗೌಡ


ಜನಾರ್ದನ ಗೌಡ

## ಸಮಾವೇಶಕ್ಕೆ ವಿಶೇಷ ಸಹಕಾರ ನೀಡಿದವರು


ಬಿ.ಎಸ್. ಲೋಕೇಶ್ ಕುಮಾರ್


ವೈ. ಡಿ. ಕೇಶವಾನಂದ


ಭರತ ಮುಂಡೋಡಿ


ಎಸ್. ಎನ್. ಮನ್ಮಥ


ಧನಂಜಯ ಅಡ್ಪಂಗಾಯ


ಜಾಕೆ ಮಾಧವ ಗೌಡ


ಎ.ಬಿ. ವೆಂಕಪ್ಪ ಗೌಡ

# ಸಂಪಾದಕ ಸಮಿತಿ



ಡಾ. ಕೆ. ಚಿನ್ನಪ್ಪ ಗೌಡ,

*ಗೌರವ ಸಂಪಾದಕರು*



ದೇವಸ್ಯ ಮನೋಹರ

*ಪ್ರಧಾನ ಸಂಪಾದಕರು*

## ಸಂಪಾದಕರು



ಡಾ. ವಿಶ್ವನಾಥ ಬದಿಕಾನ,



ಡಾ. ಜಿ.ಪಿ. ಶಿವರಾಂ



ಯದುಪತಿ ಗೌಡ



ಪಿ. ವಾಸುದೇವಗೌಡ,

# ಲೇಖಕರು


ಪ್ರೊ. ಕೆ. ಕುಶಾಲಪ್ಪ ಗೌಡ


ಕುತ್ಯಾಳ ನಾಗಪ್ಪ ಗೌಡ


ಟಿ.ಜಿ. ಮುಡೂರು


ಎ.ಕೆ. ಹಿಮಕರ


ಯು.ಸು.ಗೌ. ಗುತ್ತಿಗಾರು


ಸಂಜೀವ ಕುದ್ಪಾಜೆ


ಶ್ರೀಮತಿ ಶೀಲಾವತಿ ಕೊಳಂಬೆ


ಶ್ರೀಮತಿ ಜಯಮ್ಮ ಬ. ಚೆಟ್ಟಿಮಾಡ


ಲೋಕೇಶ್ ಪೆರ್ಲಂಪಾಡಿ


ಕೆ.ಸಿ. ಮುತ್ತಪ್ಪ


ಜ್ಞಾನೇಶ್ ನಿಡ್ಯಮಲೆ


ಪದ್ಮ ಕಾರ್ಕಳ


ಆನಂದ ಗೌಡ ಪಿ.ಎಂ.


ಡಿ.ಜಿ. ನಡ್ಕ


ಶ್ರೀಮತಿ ಲಲಿತಾ ಜ ಮಲ್ಲಾರ


ಶ್ರೀಮತಿ ವೇದಾವತಿ ಅನಂತ , ನಿಡ್ಯಮಲೆ


ಪುರುಷೋತ್ತಮ ಕೆ.ವಿ.


ಬಿ.ಎಂ. ಶೇಷಪ್ಪ ಗೌಡ

# ಶ್ರೀ ಆದಿಚುಂಚನಗಿರಿ ಕ್ಷೇತ್ರದಿಂದ ಭೈರವ ಜ್ಯೋತಿ ರಥ ಯಾತ್ರೆ, ಮಂಗಳೂರಿಗೆ ಆಗಮನ (18-1-2003)

















# ಜನವರಿ 19, 2003 - ಗೌಡರ ಸಮ್ಮೇಳನ - ಉದ್ಘಾಟನಾ ಸಮಾರಂಭದ ಕ್ಷಣಗಣನೆ ........















## ಸಮಾರಂಭ, ಶ್ರೀ ಸ್ವಾಮೀಜಿಯವರಿಂದ ಆಶೀರ್ವಚನ, ಗಣ್ಯರಿಗೆ ಗೌರವಾರ್ಪಣೆ



















# ಗೌಡರ ಸಮ್ಮೇಳನ ಸಮಿತಿ - 2003 ಮಂಗಳೂರು ದ.ಕ.

ಶ್ರೀ ಆದಿಚುಂಚನಗಿರಿ ಮಹಾಸಂಸ್ಥಾನ ಮಠದ ಜಗದ್ಗುರು ಶ್ರೀಶ್ರೀ ಶ್ರೀ ಬಾಲಗಂಗಾಧರನಾಥ ಮಹಾಸ್ವಾಮಿಗಳ ಜನ್ಮವರ್ಧಂತ್ಯುತ್ಸವ ಮತ್ತು ಬೆಳ್ಳಿ ತುಲಾಭಾರ ಮತ್ತು ಒಕ್ಕಲಿಗರ ಯಾನೆ ಗೌಡರ ಸೇವಾ ಸಂಘ (ರಿ), ಮಂಗಳೂರು ಇದರ

**ಬೆಳ್ಳಿಹಬ್ಬ ಮತ್ತು ಗೌಡರ ಬೃಹತ್ ಸಮ್ಮೇಳನ - 2003 ಮಂಗಳೂರು,**

*ಚಾರಿತ್ರಿಕ ಸಮಾರಂಭದ ಆತ್ಮೀಯ ಕರೆಯೋಲೆ,*

ಕುವೆಂಪು ನಗರ ಕುರುಂಜಿ ವೆಂಕಟ್ರಮಣ ಗೌಡ ಸಭಾಂಗಣ

## ಉದ್ಘಾಟನಾ ಸಮಾರಂಭ

ದಿನಾಂಕ : 19-1-2003 ಸಮಯ : ಬೆಳಿಗ್ಗೆ 10-00

ದಿವ್ಯಸಾನ್ನಿಧ್ಯ ಮತ್ತು ಆಶೀರ್ವಚನ : ಪರಮ ಪೂಜ್ಯ ಜಗದ್ಗುರು ಶ್ರೀ ಶ್ರೀ ಶ್ರೀ ಬಾಲಗಂಗಾಧರನಾಥ ಮಹಾಸ್ವಾಮಿಗಳು.
( ಶ್ರೀ ಆದಿಚುಂಚನಗಿರಿ ಕ್ಷೇತ್ರ )

ಉದ್ಘಾಟನೆ : ಸನ್ಮಾನ ಶ್ರೀ ಎಸ್.ಎಂ. ಕೃಷ್ಣ, ಮಾನ್ಯ ಮುಖ್ಯಮಂತ್ರಿಗಳು. ಕರ್ನಾಟಕ ಸರಕಾರ.

ಅಧ್ಯಕ್ಷತೆ : ಸನ್ಮಾನ್ಯ ಶ್ರೀ ಕುರುಂಜಿ ವೆಂಕಟ್ರಮಣ ಗೌಡ, ಸ್ಥಾಪಕಾಧ್ಯಕ್ಷರು. ಅಕಾಡೆಮಿ ಆಫ್ ಲಿಬರಲ್ ಎಜುಕೇಶನ್. ಸುಳ್ಯ

## ಮುಖ್ಯ ಅತಿಥಿಗಳು

ಆಕರ ಗ್ರಂಥ ಬಿಡುಗಡೆ : ಸನ್ಮಾನ್ಯ ಶ್ರೀ ಹೆಚ್. ಸಿ. ಶ್ರೀಕಂಠಯ್ಯ, ಕಂದಾಯ ಸಚಿವರು. ಕರ್ನಾಟಕ ಸರಕಾರ

ಪ್ರೊ. ದೊಡ್ಡರಂಗೇ ಗೌಡ ರಚಿತ "ಶ್ರೀ ಗುರುಸಂಕೀರ್ತನ" ಧ್ವನಿಸುರುಳಿ ಬಿಡುಗಡೆ : ಸನ್ಮಾನ್ಯ ಶ್ರೀ ಡಿ.ಬಿ. ಚಂದ್ರೇಗೌಡ, ಕಾನೂನು ಸಚಿವರು. ಕರ್ನಾಟಕ ಸರಕಾರ

ಡಾ.ರಾಜೇಶ್ವರಿ ಗೌಡ ರಚಿತ "ಶ್ರೀ ಗುರು ವಚನ ಕುಸುಮಾಂಜಲಿ" ಕೃತಿ ಬಿಡುಗಡೆ : ಸನ್ಮಾನ್ಯ ಶ್ರೀ ಟಿ.ಬಿ. ಜಯಚಂದ್ರ, ದೆಹಲಿಯಲ್ಲಿ ರಾಜ್ಯ ಸರಕಾರದ ವಿಶೇಷ ಪ್ರತಿನಿಧಿ

ಪ್ರೊ.ದೊಡ್ಡರಂಗೇ ಗೌಡ ರಚಿತ "ಗಂಗಾತರಂಗ" ಧ್ವನಿಸುರುಳಿ ಬಿಡುಗಡೆ : ಸನ್ಮಾನ್ಯ ಶ್ರೀ ಅಂಬರೀಶ್ ಲೋಕಸಭಾ ಸದಸ್ಯರು

ನಾ. ಪುರುಷೋತ್ತಮ ಕುಳಗೇರಿ ರಚಿತ "ಇಪ್ಪತ್ತು ಮೆಟ್ಟಿಲು-ನೂರು ತೊಟ್ಟಿಲು" ಕವನ ಸಂಕಲನ ಬಿಡುಗಡೆ : ಸನ್ಮಾನ್ಯ ಶ್ರೀ ಹೆಚ್.ಕೆ. ಜವರೇ ಗೌಡ, ರಾಜ್ಯಸಭಾ ಸದಸ್ಯರು

ಕೃಷಿಕ್ ಸರ್ವೋದಯ ಫೌಂಡೇಶನ್ ಉದ್ಘಾಟನೆ : ಸನ್ಮಾನ್ಯ ಶ್ರೀ ಸಿ. ಬೈರೇ ಗೌಡ, ಮಾಜಿ ಸಚಿವರು. ಕರ್ನಾಟಕ ಸರಕಾರ

ಪುತ್ತೂರು ತಾಲೂಕು ಗೌಡರ ಮಾಹಿತಿ ಪುಸ್ತಕ ಬಿಡುಗಡೆ : ಸನ್ಮಾನ್ಯ ಶ್ರೀ ಸಿ. ವಿಠಲ್, ಅಧ್ಯಕ್ಷರು. ಒಕ್ಕಲಿಗರ ಸಂಘ. ಬೆಂಗಳೂರು

ಪ್ರಾಸ್ತಾವಿಕ ಭಾಷಣ : ಸನ್ಮಾನ್ಯ ಶ್ರೀ ಕೆ. ಆರ್. ಚಾಮಯ್ಯ, ನಿವೃತ್ತ ಮುಖ್ಯ ಕಾನೂನು ಕಾರ್ಯದರ್ಶಿ

## ಗೌರವಾನ್ವಿತ ಅತಿಥಿಗಳು

ಸನ್ಮಾನ್ಯ ಶ್ರೀಮತಿ ಡಿ.ಕೆ. ತಾರಾದೇವಿ ಸಿದ್ಧಾರ್ಥ, ಮಾಜಿ ಕೇಂದ್ರ ಸಚಿವೆ
ಸನ್ಮಾನ್ಯ ಶ್ರೀ ರಾಮಚಂದ್ರ ಗೌಡ, ಶಾಸಕರು
ಸನ್ಮಾನ್ಯ ಶ್ರೀ ಡಿ. ಎಂ. ಪುಟ್ಟೇಗೌಡ, ಮಾಜಿ ಲೋಕಸಭಾ ಸದಸ್ಯರು
ಸನ್ಮಾನ್ಯ ಶ್ರೀ ಡಿ.ಎ. ಚಿಣ್ಣಪ್ಪ, ಮಾಜಿ ಸಚಿವರು
ಸನ್ಮಾನ್ಯ ಡಾ| ಅಶ್ವತ್ಥ ನಾರಾಯಣ, ಅಧ್ಯಕ್ಷರು. ಪದ್ಮಶ್ರೀ ವಿದ್ಯಾಸಂಸ್ಥೆ. ಬೆಂಗಳೂರು

## ವಿಚಾರ ಗೋಷ್ಠಿ : ಗೌಡ ಜನಾಂಗದ ಮುನ್ನೋಟ ಸಮಯ : ಮಧ್ಯಾಹ್ನ 2.00

ಅಧ್ಯಕ್ಷತೆ : ಸನ್ಮಾನ್ಯ ಡಾ| ಶ್ರೀ ಕೆ. ಚಿದಾನಂದ ಗೌಡ, ಕುಲಪತಿ. ಕುವೆಂಪು ವಿಶ್ವವಿದ್ಯಾಲಯ

ಮುಖ್ಯ ಅತಿಥಿಗಳು : ಸನ್ಮಾನ್ಯ ಶ್ರೀ ಅರಗ ಜ್ಞಾನೇಂದ್ರ, ಶಾಸಕರು
: ಸನ್ಮಾನ್ಯ ಶ್ರೀ ಮತಿ ಕೆ.ಪಿ. ಚಂದ್ರಕಲಾ, ಮಾಜಿ ಅಧ್ಯಕ್ಷರು. ಜಿಲ್ಲಾ ಪಂಚಾಯತ್. ಮಡಿಕೇರಿ

## ವಿಷಯ ಮಂಡನೆ

ಗೌಡ ಜನಾಂಗ ಮತ್ತು ರಾಜಕೀಯ : ಸನ್ಮಾನ್ಯ ಶ್ರೀ ಡಿ.ಎಸ್. ಮಾದಪ್ಪ, ಮಾಜಿ ಶಾಸಕರು

ಗೌಡ ಜನಾಂಗ ಮತ್ತು ಶಿಕ್ಷಣ : ಸನ್ಮಾನ್ಯ ಶ್ರೀ ಪದ್ಮನಾಭ ಬಿಳಿಮಲೆ, ಪ್ರಾಂಶುಪಾಲರು ಭುವನೇಂದ್ರ ಕಾಲೇಜು. ಕಾರ್ಕಳ

ಗೌಡ ಜನಾಂಗ ಮತ್ತು ಕೃಷಿ : ಸನ್ಮಾನ್ಯ ಶ್ರೀ ಎನ್.ಎಸ್. ದೇವಿಪ್ರಸಾದ್ ಸಂಪಾಜೆ, ಪ್ಲಾಂಟರ್

ಸಮನ್ವಯಕಾರರು : ಡಾ| ಶ್ರೀಮತಿ ವಸಂತಿ ವಿಜಯ್, ಬೆಂಗಳೂರು ವಿಶ್ವವಿದ್ಯಾಲಯ.

## ಬೆಳ್ಳಿಹಬ್ಬ ಮತ್ತು ಸಮಾರೋಪ ಸಮಾರಂಭ ಸಮಯ : ಸಂಜೆ 3-00

ದಿವ್ಯಸಾನ್ನಿಧ್ಯ ಮತ್ತು ಆಶೀರ್ವಚನ :

ಪರಮ ಪೂಜ್ಯ ಜಗದ್ಗುರು ಶ್ರೀ ಶ್ರೀ ಶ್ರೀ ಬಾಲಗಂಗಾಧರನಾಥ ಮಹಾಸ್ವಾಮಿಗಳು ಶ್ರೀ ಆದಿಚುಂಚನಗಿರಿ ಕ್ಷೇತ್ರ

ಅಧ್ಯಕ್ಷತೆ : ಸನ್ಮಾನ್ಯ ಶ್ರೀ ಬಿ.ಎಲ್.ಶಂಕರ್, ಸಭಾಪತಿ ವಿಧಾನಪರಿಷತ್, ಕರ್ನಾಟಕ ಸರಕಾರ

### ಮುಖ್ಯ ಅತಿಥಿಗಳು

ಸನ್ಮಾನ್ಯ ಶ್ರೀ ಡಿ.ಕೆ. ಶಿವಕುಮಾರ್, ನಗರಾಭಿವೃದ್ಧಿ ಸಚಿವರು, ಕರ್ನಾಟಕ ಸರಕಾರ

ಸನ್ಮಾನ್ಯ ಶ್ರೀ ಬಚ್ಚೇಗೌಡ, ಶಾಸಕರು ಹಾಗೂ ಮಾಜಿ ಸಚಿವರು,

ಸನ್ಮಾನ್ಯ ಶ್ರೀಮತಿ ವಿಮಲಾ ಗೌಡ, ವಿಧಾನ ಪರಿಷತ್ ಸದಸ್ಯರು

### ಸನ್ಮಾನ

ಸನ್ಮಾನ್ಯ ಶ್ರೀ ವೈ.ಕೆ. ಪುಟ್ಟಸ್ವಾಮಿ ಗೌಡ, ಮಾಜಿ ಅಧ್ಯಕ್ಷರು, ಕರ್ನಾಟಕ ಲೋಕಸೇವಾ ಆಯೋಗ

ಸನ್ಮಾನ್ಯ ಶ್ರೀ ಎಂ.ಕೆ. ಶಂಕರಲಿಂಗೇ ಗೌಡ, I.A.S., ಮುಖ್ಯಮಂತ್ರಿಗಳ ಉಪಕಾರ್ಯದರ್ಶಿ

ಮತ್ತು ಸಂಘದ ಮಾಜಿ ಅಧ್ಯಕ್ಷರುಗಳು, ಕಾರ್ಯದರ್ಶಿಗಳು, ಸ್ಥಾಪಕ ಸದಸ್ಯರುಗಳು ಹಾಗೂ ಹಾಲಿ ನಿರ್ದೇಶಕರುಗಳು

### ತಾರಾ ಸಮಾಗಮ

ಶ್ರೀಮತಿ ಸುಮಲತಾ ಮತ್ತು ಶ್ರೀ ಅಂಬರೀಶ್, ಶ್ರೀಮತಿ ಸರೋಜಾದೇವಿ, ಶ್ರೀದೇವರಾಜ್,
ಶ್ರೀಮತಿ ವಿಜಯಲಕ್ಷ್ಮೀ ಮತ್ತು ಜೈ ಜಗದೀಶ್, ಶ್ರೀಮತಿ ಮಾಳವಿಕ ಮತ್ತು ಶ್ರೀ ಅವಿನಾಶ್,
ಶ್ರೀಜಗ್ಗೇಶ್, ಶ್ರೀಟಿ.ಎಸ್.ನಾಗಾಭರಣ, ಶ್ರೀಅರ್ಜುನ್ ಸರ್ಜಾ, ಕುಮಾರಿ ಪಂಚಮಿ

### ಕಾರ್ಯಕ್ರಮಗಳು

1. ಪೂರ್ಣಕುಂಭ ಸ್ವಾಗತ
2. ವೇದಘೋಷ
3. ಪ್ರಾರ್ಥನೆ
4. ಸ್ವಾಗತ ಭಾಷಣ
5. ಉದ್ಘಾಟನೆ
6. ಪ್ರಾಸ್ತಾವಿಕ ಭಾಷಣ
7. ಬೆಳ್ಳಿ ತುಲಾಭಾರ
8. ಅತಿಥಿಗಳ ಭಾಷಣ
9. ಅಧ್ಯಕ್ಷರ ಭಾಷಣ
10. ಆಶೀರ್ವಚನ
11. ವಂದನಾರ್ಪಣೆ

### ತಮಗೆಲ್ಲಾ ಹೃದಯಸ್ಪರ್ಶಿ ಸುಸ್ವಾಗತ ಬಯಸುವ

ಕುರುಂಜಿ ವೆಂಕಟ್ರಮಣ ಗೌಡ,
ಗೌರವ ಅಧ್ಯಕ್ಷರು

ಡಿ.ವಿ. ಸದಾನಂದ ಗೌಡ,
ಅಧ್ಯಕ್ಷರು

ಸಿ.ಪಿ. ಜಯರಾಮ ಗೌಡ
ಕಾರ್ಯಧ್ಯಕ್ಷರು

ಕೆ. ಲೋಕಯ್ಯ ಗೌಡ ಮತ್ತು ಬರೆಮೇಲು ಕರುಣಾಕರ ಗೌಡ,
ಪ್ರಧಾನ ಕಾರ್ಯದರ್ಶಿಗಳು

ಎಂ.ಪಿ. ಉಮೇಶ
ಖಜಾಂಜಿ

### ಗೌರವ ಸದಸ್ಯರು

ಸೀತಾರಾಮ ಕ್ಯಾಂಪ್ಕೋ, ಪಿ.ಎ. ಗಣಪತಿ, ಕೋದಂಡರಾಮೇಗೌಡ,
ಬಿ.ಎಸ್. ಲೋಕೇಶ್ ಕುಮಾರ್, ರಾಮಲಿಂಗೇಗೌಡ, ಕೆ.ಪಿ.ಉಮೇಶ್ ಕುಮಾರ್

### ಪ್ರಧಾನ ಸಂಚಾಲಕರು

ರಾಮಚಂದ್ರ ಗೌಡ ಮಂಗಳೂರು, ನಿತ್ಯಾನಂದ ಮುಂಡೋಡಿ, ಸುಳ್ಯ, ಕೆ.ಸಿ.ನಾರಾಯಣ ಗೌಡ ಸುಳ್ಯ, ಪದ್ಮ ಗೌಡ ಬೆಳ್ತಂಗಡಿ, ಇಡ್ಯಡ್ಕ ಮೋಹನ ಗೌಡ ಪುತ್ತೂರು, ಲಿಂಗಪ್ಪ ಗೌಡ ಬಂಟ್ವಾಳ, ಪುರುಷೋತ್ತಮ ಗೌಡ ಕಾರ್ಕಳ, ಪುರುಷೋತ್ತಮ ಉಡುಪಿ

---

## ಒಕ್ಕಲಿಗರ ಯಾನೆ ಗೌಡರ ಸೇವಾ ಸಂಘ (ರಿ.)

ಬಿಲಿಂಬಿ, ಮಂಗಳೂರು -575 006 ಫೋನ್ : 452844

ಎನ್. ರಾಮಚಂದ್ರ ಗೌಡ, ಅಧ್ಯಕ್ಷರು, ಕೆ. ಲೋಕಯ್ಯ ಗೌಡ, ಕಾರ್ಯದರ್ಶಿ, ಎನ್ ಎಸ್ ನಾರಾಯಣ ಗೌಡ, ಉಪಾಧ್ಯಕ್ಷರು, ಪಿ.ಎಸ್. ದೇವರಾಜ್, ಜತೆ ಕಾರ್ಯದರ್ಶಿ, ಟಿ.ಮಂಜಪ್ಪ ಗೌಡ ಖಜಾಂಜಿ

ನಿರ್ದೇಶಕರುಗಳು : ಪಿ.ವಾಸುದೇವ ಗೌಡ, ಯಂ. ಸಂಜೀವ ಗೌಡ, ಕೆ. ಗಿರೀಶ, ಕೆ. ಧರ್ಮಪಾಲ ಗೌಡ, ಕೆ.ಸಿ. ಮಂಜುನಾಥ, ವಿ.ಬಿ. ಗೋವಿಂದೇ ಗೌಡ, ಕೆ. ಸಂಜೀವ ಗೌಡ, ಡಿ. ಪದ್ಮನಾಭ ಗೌಡ, ಐ.ಎಸ್.ಸುರೇಶ್, ಕುಸುಮಾಧರ ಗೌಡ

ಜನವಾಹಿನಿ
ಭಾನುವಾರ 19ನೇ ಜನವರಿ 2003

## ಇಂದು ಗೌಡರ ಬೃಹತ್ ಸಮ್ಮೇಳನ

ಮಂಗಳೂರು, ಜ. 18: ಶ್ರೀ ಬಾಲ ಗಂಗಾಧರನಾಥ ಸ್ವಾಮೀಜಿಗಳ ಜನ್ಮವರ್ಧಂತ್ಯುತ್ಸವ ಮತ್ತು ಬೆಳ್ಳಿ ತುಲಾಭಾರ, ಮಂಗಳೂರು ಗೌಡರ ಸಂಘದ ಬೆಳ್ಳಿಹಬ್ಬ ಮತ್ತು ಗೌಡರ ಬೃಹತ್ ಸಮ್ಮೇಳನ -2003 ಜನವರಿ ಹತ್ತೊಂಭತ್ತರಂದು ಕೂಳೂರು ಮೈದಾನಿನ ಕುವೆಂಪು ನಗರದಲ್ಲಿ ಜರಗಲಿದೆ.

ಈಗಾಗಲೇ ಭವ್ಯವಾದ ವೇದಿಕೆ ಸಿದ್ಧಗೊಂಡಿದ್ದು, ವಿಶಾಲವಾದ ಚಪ್ಪರವನ್ನು ನಿರ್ಮಿಸಲಾಗಿದೆ. ಸಮಾವೇಶಕ್ಕಾಗಮಿಸುವ ಜನರಿಗಾಗಿ ಸಕಲ ವ್ಯವಸ್ಥೆ ಮಾಡಲಾಗಿದ್ದು, ಗಣ್ಯ ಹಾಗೂ ಅತಿ ಗಣ್ಯರ ಭದ್ರತೆಗಾಗಿ ವಿಶೇಷ ವ್ಯವಸ್ಥೆ ಮಾಡಲಾಗಿದೆ. ಇದೇ ಸಮಯದಲ್ಲಿ ಗೌಡರ ಸಂಸ್ಕೃತಿಯನ್ನು ಬಿಂಬಿಸುವ ಕಾರ್ಯಕ್ರಮಗಳಿಗೆ ಒತ್ತು ನೀಡಲಾಗಿದೆ. ಸಾಂಪ್ರದಾಯಿಕ ಊಟೋಪಚಾರದ ವ್ಯವಸ್ಥೆಯನ್ನೂ ಮಾಡಲಾಗಿದೆ.

## ಗೌಡರ ಸಮ್ಮೇಳನಕ್ಕೆ ಮುಖ್ಯಮಂತ್ರಿ

ಮಂಗಳೂರು, ಜ. 18: ಮುಖ್ಯಮಂತ್ರಿ ಎಸ್. ಎಂ. ಕೃಷ್ಣ ಅವರು ಇಂದು ಮಂಗಳೂರಿಗೆ ಭೇಟಿ ನೀಡಲಿದ್ದಾರೆ. ಬೆಳಗ್ಗೆ 10.30ಕ್ಕೆ ಮುಂಬಯಿಯಿಂದ ವಿಮಾನ ಮೂಲಕ ಮಂಗಳೂರಿಗೆ ಆಗಮಿಸುವ ಅವರು ಕುಳೂರಿನ ಕುವೆಂಪು ನಗರದಲ್ಲಿ ನಡೆಯುವ ಒಕ್ಕಲಿಗರ ಯಾನೆ ಗೌಡರ ಸಮ್ಮೇಳನದಲ್ಲಿ ಪಾಲ್ಗೊಳ್ಳುವರು. ಸಮ್ಮೇಳನದಲ್ಲಿ ಪಾಲ್ಗೊಂಡ ಬಳಿಕ ಅವರು ಮಧ್ಯಾಹ್ನ 3.00 ಗಂಟೆಗೆ ವಿಮಾನ ಮೂಲಕ ಬೆಂಗಳೂರಿಗೆ ತೆರಳುವರು.



DECCAN HERALD
PRINTED AT BANGALORE, HUBLI-DHARWAD, MANGALORE & GULBARGA
MANGALORE, MONDAY, JANUARY 19, 2003

## Krishna to inaugurate Vokkaliga meet today

DH News Service

MANGALORE, Jan 18
Mangalore, the nerve centre of Tulu Nadu always enjoyed the honour of being the cradle of muti-cutural and multi-lingual civilisation and the mamoth gathering of Gowda alias Vokkaliga community scheduled to be held here tomorrow will only add a new chapter in the histroy of Dakshina Kannada district.

In the district the Vkkaliga population is confined to areas like Belthangadi, Sullia, Puttur and surrounding places.

The massive Gowda conference will be held at the spaciously arranged Kuvempu nagar at Kuloor where the World Bunts' Convention was held recently. Chief Minister S M Krishna will inaugurate the event with educationist Kurunji Venkataramana Gowda, founder chairman of Academy of LIberal Education, Sullia in the chair.

Sri Balagangadhara Swamiji of Sri Adichunchanagiri will grace the occasion. Insidently the day is also the birth day of the Swamiji and a Tulabhara in silver coins will be offered to the Swamiji.

## Krishna to inaugurate Gowdara sammelana

Mangalore, Jan 18: The Gowdara Bruhat Sammelana will be inaugurated by Chief Minister S.M.Krishna at Kuvempu Nagar, Kulur, at 10 a.m. on Sunday. Founding president of Academy of Liberal Education, Sullia, Kurunji Venkatramana Gowda will preside over the function.

The aim of the sammelana is to create a sense of pride and confidence in the Gowda community about its capabilities, said D.V.Sadananda Gowda, president of Gowdara Sammelana Samiti.

The New Indian Express
SUNDAY JANUARY 19, 2003

An estimated 50,000 people will participate in the sammelana, according to the general secretary of the conference committee, Baremelu Karunakar Gowda. The highlight of the sammelana is said to be *tulabhara* for Balagangadharnath Swamy on the occasion of his 58th birth anniversary

The sammelana is being organised on a 30-acre land which has been spruced up at the stock exchange ground, Kulur. A galaxy of Kannada film stars including Ambareesh, Jaggesh, T.S.Nagabharana and Devraj will be present-
• ENS

ಹೊಸ ದಿಗಂತ

ಗೌಡರ ಸಮ್ಮೇಳನ ವಿಶೇಷಾಂಕ

2003

ತಾನೂ ಬದುಕಿ ಇತರರೂ ಬದುಕಲು ಬಿಡಿ. ಇದೇ ನಮ್ಮ ಸಂಸ್ಕೃತಿ

ಆದಿಚುಂಚನಗಿರಿ ಶ್ರೀ ಬಾಲಗಂಗಾಧರನಾಥ ಶ್ರೀಗಳು

# ಜನವರಿ 19, 2003 ಸಮಾವೇಶದ ಸುದ್ದಿ ಚಿತ್ರಗಳು

ಪ್ರಜಾವಾಣಿ

ಅತ್ಯಂತ ವಿಶ್ವಾಸಾರ್ಹ ಕನ್ನಡ ದಿನಪತ್ರಿಕೆ

ಬೆಂಗಳೂರು, ಹುಬ್ಬಳ್ಳಿ – ಧಾರವಾಡ, ಮಂಗಳೂರು ಮತ್ತು ಕಲ್ಬುರ್ಗಿಯಿಂದ ಪ್ರಕಟಿತ

## ಮಧುರ ಬಾಂಧವ್ಯ ಚಿಗುರಿಸಲು ಆದಿಚುಂಚನಗಿರಿ ಸ್ವಾಮಿ ಕರೆ

ಕುವೆಂಪುನಗರ (ಮಂಗಳೂರು), ಜ. 19– ಗ್ರಾಮಗಳಲ್ಲಿ ಒಂದೆ ಕುಟುಂಬ ಸಾಮರಸ್ಯ, ಪ್ರೀತಿ- ವಾತ್ಸಲ್ಯ ಭಾವನೆಗಳು ಮಾಯವಾಗುತ್ತಿರುವುದು ವಿಷಾದನೀಯ ಸಂಗತಿಯಾಗಿದ್ದು, ಹಿಂದಿದ್ದ ಮಧುರ ಬಾಂಧವ್ಯವನ್ನು ಬರಡು ಮಾಡಲು ಹೋಗಬೇಡಿ ಎಂದು ಆದಿಚುಂಚನಗಿರಿ ಮಠದ ಶ್ರೀ ಬಾಲಗಂಗಾಧರನಾಥ ಸ್ವಾಮಿಯವರು ಇಂದು ಇಲ್ಲಿ ನುಡಿದರು.

ಇಂದು ಸಮಾಜದಲ್ಲಿ ಎಲ್ಲರೂ ವಿದ್ಯಾವಂತರಾಗಿದ್ದಾರೆ. ಸ್ವಾಭಿಮಾನಕ್ಕೆ ಧಕ್ಕೆಯಾದಾಗ ಸಿಡಿದೇಳುವ ಪ್ರವೃತ್ತಿ ಬೆಳೆಸಿಕೊಂಡಿದ್ದಾರೆ. ಸಂಘಟನೆಯಾಗುವುದು ಯಾರ ಮೇಲೂ ಸಂಘರ್ಷ ಮಾಡಲು ಅಲ್ಲ. ನಮ್ಮ ಮಕ್ಕಳನ್ನು ವಿದ್ಯಾವಂತರನ್ನಾಗಿ ಮಾಡಬೇಕು. ಸಮಾನವಾಗಿ, ಸ್ವಾಭಿಮಾನದಿಂದ ಬದುಕಲು, ಸರ್ಕಾರದಿಂದ ಬರುವ ಸವಲತ್ತುಗಳನ್ನು ದೊರಕಿಸಿಕೊಳ್ಳಲು ಎಂದೂ ಅವರು ಹೇಳಿದರು.

## ಸ್ವಾಮೀಜಿಗೆ ಬೆಳ್ಳಿ ತುಲಾಭಾರ

ಕುವೆಂಪುನಗರ (ಮಂಗಳೂರು), ಜ. 19– ದಕ್ಷಿಣ ಕನ್ನಡದ ಸಾಂಸ್ಕೃತಿಕ ಪ್ರತಿಬಿಂಬವಾಗಿದ್ದ ಇಲ್ಲಿನ ಕುರುಂಜಿ ವೆಂಕಟ್ರಮಣಗೌಡ ವೇದಿಕೆಯಲ್ಲಿ ನಡೆದ ಗೌಡರ ಸಮ್ಮೇಳನದಲ್ಲಿ 58 ಸಂವತ್ಸರ ಪೂರೈಸಿದ ಆದಿಚುಂಚನಗಿರಿ ಮಠದ ಬಾಲಗಂಗಾಧರನಾಥ ಸ್ವಾಮಿಯವರಿಗೆ ವೈಭವೋಪೇತವಾಗಿ ಬೆಳ್ಳಿ ತುಲಾಭಾರ ಮಾಡಲಾಯಿತು.

ಉದಯವಾಣಿ 21-1-2003

## ಗೌಡರು ಕೂಡ ಬಲಾಢ್ಯ ರಾಜಕೀಯ ಶಕ್ತಿಯಾಗಿ ಹೊರ ಹೊಮ್ಮಲಿ

### ಕುರುಂಜಿ

ಕುವೆಂಪುನಗರ, ಕೂಳೂರು (ಮಂಗಳೂರು) ಜ. 20: ಎಲ್ಲಾ ಸಮಾಜದವರು ಅವರವರ ಸಮಾಜವನ್ನು ಸಂಘಟಿಸಿ ರಾಜಕೀಯ ಶಕ್ತಿಯಾಗಿ ಬೆಳೆಯುತ್ತಿರುವ ಈ ದಿನಗಳಲ್ಲಿ ಗೌಡರು ಕೂಡಾ ಪ್ರಸಕ್ತ ಸ್ಥಾನಮಾನಕ್ಕೆ ಹೊಂದಿಕೊಂಡು ಸಂಘಟಿತರಾಗಿ ಕೊಂಡು ಬಲಾಢ್ಯ ಶಕ್ತಿಯಾಗಿ ಹೊರ ಹೊಮ್ಮಬೇಕಾಗಿದೆ ಎಂದು ಸುಳ್ಯದ ಅಕಾಡೆಮಿ ಆಫ್ ಲಿಬರಲ್ ಎಜುಕೇಶನ್‌ನ ಸ್ಥಾಪಕಾಧ್ಯಕ್ಷ ಶ್ರೀ ಕುರುಂಜಿ ವೆಂಕಟ್ರಮಣ ಗೌಡ ನಿನ್ನೆ ಇಲ್ಲಿ ಕರೆ ನೀಡಿದರು.

ಅವರು ಗೌಡರ ಬೃಹತ್ ಸಮ್ಮೇಳನದ ಅಧ್ಯಕ್ಷತೆ ವಹಿಸಿ ಮಾತನಾಡುತ್ತಿದ್ದರು. ಗೌಡ ಜನಾಂಗದ ನಾವೆಲ್ಲರೂ ಒಂದೆಡೆ ಸೇರಿರುವುದು ಅತ್ಯಂತ ಸಂತಸದ ವಿಚಾರ. ದಕ್ಷಿಣ ಕನ್ನಡ ಜಿಲ್ಲೆಯ ಅತೀ ದೊಡ್ಡ ಜನಾಂಗವಾದ ಗೌಡ ಜನಾಂಗ ಇಂತಹ ಸುಸಂದರ್ಭಗಳಲ್ಲಿ ಒಂದೆಡೆ ಸೇರಿ ಕಲೆತು, ಬೆರೆತು, ಬೃಹತ್ ಹಾಗೂ ನಿರ್ಣಾಯಕ ಶಕ್ತಿಯಾಗಿ ಬೆಳೆಯಬೇಕಾಗಿದೆ.

ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಮುಖ್ಯವಾಗಿ ಕೃಷಿಯನ್ನು ಅವಲಂಬಿಸಿ ಬದುಕುತ್ತಿರುವ ಅರೆಭಾಷೆ ಮತ್ತು ತುಳುಭಾಷಿಗಳನ್ನು ಆಡುನುಡಿಯಾಗಿ, ಇತ್ತೀಚಿನ ದಿನಗಳಲ್ಲಿ ಸಾಕಷ್ಟು ಸಾಮಾಜಿಕವಾಗಿ, ಶೈಕ್ಷಣಿಕವಾಗಿ, ಸಾಹಿತ್ಯಿಕವಾಗಿ, ಸಾಂಸ್ಕೃತಿಕವಾಗಿ ಬೆಳೆಯುತ್ತಿರುವ ಗೌಡ ಜನಾಂಗ ಇನ್ನಷ್ಟು ಸಂಘಟಿತವಾಗಿ ಬೆಳೆಯಬೇಕಾಗಿದೆ ಎಂದರು.

ಸುದ್ದಿ ಬಿಡುಗಡೆ

ಕನ್ನಡ ವಾರಪತ್ರಿಕೆ ಸುಳ್ಯ

### ಮಂಗಳೂರಿನಲ್ಲಿ ನಡೆದ ಗೌಡರ ಬೃಹತ್ ಸಮ್ಮೇಳನಕ್ಕೆ ಸುಳ್ಯ ತಾಲೂಕಿನಿಂದ 1000 ವಾಹನಗಳು

## ತಾಲೂಕಿನ ಜನರಿಂದ ಭೈರವ ಜ್ಯೋತಿಗೆ ಭವ್ಯ ಸ್ವಾಗತ

ಜ.19ರಂದು ಮಂಗಳೂರಿನಲ್ಲಿ ನಡೆದ …ಗೌಡರ ಬೃಹತ್ ಸಮ್ಮೇಳನ ಮತ್ತು …ಆದಿಚುಂಚನಗಿರಿ ಮಠದ ಬಾಲಗಂಗಾಧರ…ನಾಥ ಸ್ವಾಮೀಜಿಯವರ ವರ್ಧಂತ್ಯುತ್ಸವ …ಕಾರ್ಯಕ್ರಮಕ್ಕೆ ಸುಮಾರು 800 ಜೀಪುಗಳು …ಮತ್ತು ವ್ಯಾನ್‌ಗಳು ಸೇರಿದಂತೆ ಸುಮಾರು …000 ವಾಹನಗಳಲ್ಲಿ 15 ಸಾವಿರಕ್ಕೂ …ತಾಲೂಕಿನಿಂದ ಹೋಗಿ ಭಾಗವಹಿಸಿದ್ದರು. ಮಂಗಳೂರಿನ ಸಮ್ಮೇಳನದಲ್ಲಿ ಮುಖ್ಯಮಂತ್ರಿ ಎಸ್.ಎಂ.ಕೃಷ್ಣ ಭಾಗವಹಿಸಿದ್ದು ಸುಮಾರು 50 ಸಾವಿರಕ್ಕೂ ಮಿಕ್ಕಿ ಜನ ಸೇರಿದ್ದರೆಂದು ತಿಳಿದುಬಂದಿದೆ.

ಸಮ್ಮೇಳನದ ಪ್ರಯುಕ್ತ ಆದಿ ಚುಂಚನಗಿರಿ ಕ್ಷೇತ್ರದಿಂದ ಹೊರಟ ಭೈರವೇಶ್ವರ ಜ್ಯೋತಿ ಜ. 12ರಂದು ಮಧ್ಯಾಹ್ನ ಸುಬ್ರಹ್ಮಣ್ಯ ತಲುಪಿದಾಗ ಭವ್ಯ ಸ್ವಾಗತ ಕೋರಲಾಯಿತಲ್ಲದೆ ಸವಣೂರು ಮಾರ್ಗವಾಗಿ ಪುತ್ತೂರಿಗೆ ಸಾಗಿದ ಜ್ಯೋತಿಗೆ ಮುರುಳ್ಯದವರೆಗೆ ದಾರಿಯುದ್ದಕ್ಕೂ ಜನರು ಕಾದು ನಿಂತು ಆರತಿ ಬೆಳಗಿ ತುಳಸಿ ಮಾಲಾರ್ಪಣೆ ಮಾಡಿ ಭಕ್ತಿ ಭಾವದ ಸ್ವಾಗತ ನೀಡಿದರು.

DECCAN HERALD

PRINTED AT BANGALORE, HUBLI-DHARWAD, MANGALORE & GULBARGA

BANGALORE MONDAY JANUARY 20, 2003

**SIDELIGHTS OF VOKKALIGA MEET**

## A show of strength

Even as the memory of the massive World Bunts' convention is fresh in the minds of the people here, another equally if not more impressive gathering was witnessed in the same venue at Bangra Kuloor, near Panambur today.

While the earlier convention was a three-day event the Gowdara Sammelana to mark the silver jubilee of the Vokkaligara Sangha, Mangalore was a day-long affair.

As the Chief Minister was addressing after inaugurating the conference by lighting a lamp, people were still entering the conference venue, named Kuvempu Nagar after the great poet and the impressive gathering was made mention of by many a speaker. It was reminiscent of the Bunts convention which had touched at one point 30,000 mark.

8-2-2003 ಉದಯವಾಣಿ

## ಸಾದರ ಸ್ವೀಕಾರ

ಗೌಡ ಜನಾಂಗ

ಇತಿಹಾಸ ಮತ್ತು ಸಂಸ್ಕೃತಿ

ಡಾ. ಕೆ. ಚಿನ್ನಪ್ಪ ಗೌಡ

**T.A. Pai**
(Thoughts and Achivements)
Edited by: Dr. K.K. Ammannaya
Publishers: T.A. Pai 81st Birthday Celebration Committee
Manipal-576 119.

**ಟಿ.ಎ. ಪೈ (ಚಿಂತನೆ ಮತ್ತು ಸಾಧನೆ)**
ಪ್ರ. ಸಂಪಾದಕ: ಡಾ। ಕೆ.ಕೆ. ಅಮ್ಮಣ್ಣಾಯ
ಪ್ರ.: ಟಿ.ಎ. ಪೈ, 81ನೇ ಜನ್ಮ ದಿನಾಚರಣಾ ಸಮಿತಿ ಮಣಿಪಾಲ-576 119.

**ಗೌಡ ಜನಾಂಗ (ಇತಿಹಾಸ ಮತ್ತು ಸಂಸ್ಕೃತಿ)**
ಸಂ.: ಡಾ। ಕೆ. ಚಿನ್ನಪ್ಪ ಗೌಡ
ಪ್ರ.: ಬೆಳ್ಳಿ ಹಬ್ಬ ಆಚರಣಾ ಸಮಿತಿ ಒಕ್ಕಲಿಗರ ಯಾನೆ ಗೌಡರ ಸೇವಾ ಸಂಘ, ಮಂಗಳೂರು.
ಮೊ. ಮುದ್ರಣ: 2003 ಬೆಲೆ: ರೂ. 200.

**ಕಾರ್ಖಾನೆ ಚಿತ್ರಗಳು (ಕಥನ ಪ್ರಬಂಧ)**
ಲೇ.: ಕೆ ಎಸ್ ಭಗವಾನ್
ಪ್ರ.: ಧಾತ್ರಿ ಪ್ರಕಾಶನ, 1555, ಪೂರ್ವಾಂತ್ಯ ರಸ್ತೆ, 9ನೇ ಬ್ಲಾಕ್, ಜಯನಗರ ಬೆಂಗಳೂರು-560 069.
ಮೊ. ಮುದ್ರಣ: 2002 ಬೆಲೆ: ರೂ. 50

# ಒಕ್ಕಲಿಗರ ಇತಿಹಾಸ

✍ ಕೆ.ಟಿ. ಚಂದ್ರು

ಭರತಖಂಡವನ್ನು ಶತಶತಮಾನಗಳಿಂದ ಶೌರ್ಯ ಸಾಹಸದಿಂದ ಆಳಿದ ಒಕ್ಕಲಿಗ ವಂಶಸ್ಥರ ಇತಿಹಾಸವನ್ನು ಸಂಕ್ಷಿಪ್ತವಾಗಿ ಬರೆಯುವ ಕಷ್ಟಸಾಧ್ಯ ಕಾಯಕಕ್ಕೆ ಕೈ ಹಾಕಿದ್ದೇನೆ. ಒಕ್ಕಲಿಗ ಸಮುದಾಯದ ಐತಿಹಾಸಿಕ ಪರಂಪರೆಯನ್ನು ಯಥವತ್ತಾಗಿ ಬರೆಯುವ ಸಾಮರ್ಥ್ಯ ನನಗಿಲ್ಲವಾದರೂ ನನ್ನ ಇತಿಮಿತಿಗಳಲ್ಲಿ ಒಕ್ಕಲಿಗ ವಂಶಸ್ಥರ ಇತಿಹಾಸವನ್ನು ಕೇಳಿ ತಿಳಿದಷ್ಟನ್ನೂ ತಮ್ಮೆಲ್ಲರಿಗೂ ಪರಿಚಯ ಮಾಡಿಕೊಡುವ ಮಹದಾಸೆಯಿಂದ ಈ ಪ್ರಯತ್ನಕ್ಕೆ ಕೈ ಹಾಕಿದ್ದೇನೆ.

ಒಕ್ಕಲಿಗ ಎಂದರೆ ಒಕ್ಕಲುತನ ಮಾಡುವವನು. ಕೃಷಿ ಕಾಯಕದಲ್ಲಿ ತೊಡಗಿದವನು ಎಂದರ್ಥ. ಶಿಲಾಯುಗದಿಂದ ಹನ್ನೆರಡನೇ ಶತಮಾನದವರೆಗೆ ವಿವಿಧ ಜಾತಿಗಳನ್ನು ಅವರ ಕಸುಬುಗಳನ್ನಾಧರಿಸಿ ವಿಂಗಡಿಸಿಲಾಗಿತ್ತು ಹಾಗೂ ಅಂದು ಪ್ರತಿಯೊಂದು ಕಸುಬಿನೊಂದಿಗೆ ಜಾತಿಯನ್ನು ಗುರುತಿಸಲಾಗಿತ್ತು. ಪುರಾತನ ದಾಖಲೆಗಳಿಂದ ಸುಮಾರು5000 ವರ್ಷಗಳ ಹಿಂದೆಯೇ"ಒಕ್ಕಲು"ಎಂಬ ಹೆಸರು ರೂಢಿಯಲ್ಲಿದ್ದುದು ತಿಳಿದು ಬರುತ್ತದೆ. ಆದರೂ ಸಿಂಧೂ ಕಣಿವೆಯ ನಾಗರೀಕತೆ ಕಾಲದಿಂದಲೂ ಒಕ್ಕಲುತನ ಹಾಗೂ ಒಕ್ಕಲು ಪದ ರೂಢಿಯಲ್ಲಿದ್ದುದು ತಿಳಿದು ಬರುತ್ತದೆ. ಅಂದಿನ ವರ್ಷಗಳಲ್ಲಿ ಒಕ್ಕಲುತನವನ್ನು ತಮ್ಮ ಪ್ರಮುಖ ಕಸುಬಾಗಿಸಿಕೊಂಡಿದ್ದವರನ್ನು ಭೂಮಿಯಲ್ಲಿ ದುಡಿದು ಇತರರ ಹೊಟ್ಟೆ ತುಂಬಿಸುತ್ತಿದ್ದವರನ್ನು "ಒಕ್ಕಲಿಗ ಜಾತಿ"ಎಂದು ಕರೆದಿರುವುದು ದೃಢಪಡಿಸುತ್ತದೆ. ಒಕ್ಕಲುತನ ಕೈಗೊಳ್ಳುವುದರೊಂದಿಗೆ ಹಳ್ಳಿಯ ಮುಖ್ಯಸ್ಥರಾಗಿ, ಹಳ್ಳಿಗಳಲ್ಲಿ ಸತ್ಯ, ಧರ್ಮ, ನ್ಯಾಯ, ನೀತಿ ನೆಲೆಸಲು ಕಾರಣಕರ್ತರಾಗಿ ಪಟೇಲರು, ಗೌಡರೆಂದೇ ಪ್ರಸಿದ್ಧರಾಗಿದ್ದವರು ಒಕ್ಕಲಿಗ ವಂಶಸ್ಥರೆಂಬುದಕ್ಕೆ ಅನೇಕ ಪುರಾವೆಗಳಿವೆ. ಗೌಡ ಎಂದರೆ ಗ್ರಾಮದ ಪ್ರಧಾನ, ಪಾಳೆಯಕ್ಕೆ ಒಡೆಯ ಎಂದರ್ಥ. ಆದರೆ12ನೇ ಶತಮಾನದ ನಂತರ ಕಸುಬು ಹಾಗೂ ಜಾತಿ ಪದ್ಧತಿಯಲ್ಲೂ ಗಣನೀಯ ಬದಲಾವಣೆಗಳಾಗಿರುವುದು ತಿಳಿದು ಬರುತ್ತದೆ.

ಇಂದು ಕೃಷಿಯಲ್ಲಿ ತೊಡಗಿರುವವರೆಲ್ಲರನ್ನೂ ಒಕ್ಕಲಿಗ, ಕೃಷಿಕ ಸಮುದಾಯವೆಂದು ಕರೆದರೂ, ವಿಶಷ್ಟವಾಗಿ ಒಕ್ಕಲುತನವನ್ನೇ ಮೂಲತಃ ತಮ್ಮ ವಂಶಪಾರಂಪರ್ಯ ಕಸುಬಾಗಿಸಿಕೊಂಡಿದ್ದ ಗೌಡವಂಶಸ್ಥರನ್ನು ಒಕ್ಕಲಿಗರೆಂದು ಕರೆಯುತ್ತಿರುವುದರಲ್ಲಿ ವಿಶಿಷ್ಟ ಅರ್ಥವಿದೆ. ವಿಶಿಷ್ಟವಾಗಿ ಕರ್ನಾಟಕ, ಆಂಧ್ರ ಪ್ರದೇಶ ಹಾಗೂ ತಮಿಳುನಾಡುಗಳಲ್ಲಿ ಕೃಷಿಯನ್ನೇ ತಮ್ಮ ಪ್ರಧಾನ ಕಸುಬಾಗಿಸಿಕೊಂಡಿರುವ ಗೌಡ ವಂಶಸ್ಥರು ಒಕ್ಕಲಿಗ ಸಮುದಾಯವೆಂದು ಪ್ರಸಿದ್ಧವಾದುದು ಒಂದು ಐತಿಹಾಸಿಕ ಪರಂಪರೆಯೇ ಸರಿ. ಕರ್ನಾಟಕದ ಗೌಡರು, ತಮಿಳುನಾಡಿನ ಗೌಂಡರ್ ಹಾಗೂ ಆಂಧ್ರ ಪ್ರದೇಶದ ರೆಡ್ಡಿಗಳನ್ನು ಒಕ್ಕಲಿಗ ವಂಶಸ್ಥರೆಂದು ಕರೆಯಲಾಗಿದೆ. ಇದರೊಂದಿಗೆ ಉತ್ತರ ಭಾರತದ ಜಾಟರು ಹಾಗೂ ಉಳಿದ ಕೆಲವು ಒಕ್ಕಲುತನ ಪ್ರಧಾನವಾದ ಜಾತಿಗಳನ್ನು ಒಕ್ಕಲಿಗ ವಂಶಸ್ಥರೆನ್ನಲಾಗಿದೆ.

ಒಕ್ಕಲಿಗ ಸಮುದಾಯದ ಜಗದ್ಗುರುಗಳಾದ ಶ್ರೀಶ್ರೀ ಶ್ರೀಬಾಲಗಂಗಾಧರನಾಥ ಸ್ವಾಮೀಜಿಗಳವರು ಒಕ್ಕಲಿಗರನ್ನು ಕುರಿತು "ಓಜ ಒಕ್ಕಲಿಗ ಆದಿಪ್ರಮಾಣದ ಬೀಜ" ಎಂದಿದ್ದು, ಓಜ ಎಂದರೆ -ದಿವ್ಯ ಪ್ರಕಾಶ, ಪ್ರಣವದ ಬೀಜ ಎಂದರೆ-ಆದಿ/ ಪ್ರಮಥದಲ್ಲಿ ಇರತಕ್ಕದ್ದು ಎಂಬರ್ಥವಿದೆ. ಅಂದರೆ ಮಾನವ ಕುಲದ ಮೂಲಪುರುಷ, ಮೂಲತಃ ಪ್ರಕಾಶ ಹೊಂದಿದವನು ಸರ್ವಶಕ್ತಿದಾತನಾದವನೇ ಒಕ್ಕಲಿಗ ಎನ್ನಲಾಗಿದೆ. ಅಂದರೆ ಪ್ರಥಮವಾಗಿ ಮನುಕುಲ ಹಾಗೂ ಒಕ್ಕಲುತನಕ್ಕೆ ಪ್ರಕಾಶ ನೀಡದವನೇ "ಒಕ್ಕಲಿಗ" ಎನ್ನಬಹುದು. ಮನುಕುಲದ ಪ್ರಾರಂಭದಲ್ಲಿ ಪ್ರತಿಯೊಬ್ಬನ ಕುಲವನ್ನು ಆತನ ವೃತ್ತಿ/ ಕಸುಬನ್ನಾಧರಿಸಿ ನಿಷ್ಕರ್ಷಿಸಲಾಗಿತ್ತು. ಕುರಿಕಾಯುವವರನನ್ನು ಕುರುಬರೆಂತಲೂ, ಗೋವುಗಳನ್ನು ಕಾಯುವವರನ್ನು ಗೊಲ್ಲರೆಂತಲೂ, ಕುಂಬಾರಿಕೆ ಕೆಲಸದವನನ್ನು ಕುಂಬಾರನೆಂಬ ಅನ್ವರ್ಥನಾಮಗಳಿಂದ ಕರೆದಿದ್ದು, ಒಕ್ಕಲುತನ ಮಾಡುವವನನ್ನು "ಒಕ್ಕಲಿಗ" ಎಂದು ಕರೆದಿರುವುದು ಸ್ಪಷ್ಟ ಹಾಗೂ ಅರ್ಥಗರ್ಭಿತವಾಗಿದೆ. ಇದರಿಂದಾಗಿ ಒಕ್ಕಲಿಗ ವಂಶಸ್ಥರಿಗೆ ಅತಿ ಪುರಾತನ ಇತಿಹಾಸ ಇರುವುದು ತಿಳಿದುಬರುತ್ತದೆ.

ಸೂರ್ಯ ವಂಶಸ್ಥರು, ಇಕ್ಷ್ವಾಕು ಕುಲದವರು, ಗಂಗರು, ರಾಷ್ಟ್ರಕೂಟರು , ಕದಂಬರು ಹೊಯ್ಸಳರಾದಿಯಾಗಿ, ಕೆಂಪೇಗೌಡರ ವಂಶಸ್ಥರವರೆಗೆ ಭರತ ಖಂಡವನ್ನು ಆಳಿದ ಕೆಲವೇ ಬೆರಳೆಣಿಕೆಯ ಧೀಮಂತ ರಾಜ, ಮಹಾರಾಜರು, ಸಾಮಂತರು, ಪಾಳೇಗಾರರಲ್ಲಿ ಬಹುತೇಕರು ಒಕ್ಕಲಿಗ ವಂಶಸ್ಥರೆಂದು ಇತಿಹಾಸ ಹಾಗೂ ಪುರಾಣಗಳಿಂದ ತಿಳಿದು ಬರುತ್ತದೆ.

ಭರತ ಖಂಡವನ್ನು ಆಳಿದ ಅತಿಶ್ರೇಷ್ಠ ಸಾರ್ವಭೌಮರಲ್ಲಿ ಒಬ್ಬರಾದ ಜನಕ ಮಹಾರಾಜರೂ ಒಕ್ಕಲಿಗ ವಂಶಸ್ಥರೆಂಬ ಪ್ರತೀತಿ ಇದೆ. ಹಿಮಾಲಯ ಪರ್ವತದ ತಪ್ಪಲಿನ ಗಂಗಾ ನದಿ ಮುಖಜ ಭೂಮಿಯ ಗಂಡಕಿ ಪ್ರದೇಶವೇ ಜನಕ ಮಹಾರಾಜರು ಆಳಿದ ಮಿಥಿಲಾ ನಗರಿಯಾಗಿದ್ದು. ಈ ಮಿಥಿಲಾನಗರ ಗೌಡ ವಂಶಸ್ಥರ ರಾಜ್ಯವಾಗಿತ್ತೆಂದು ಐತಿಹಾಸಿಕ ಪುರಾವೆಗಳಿಂದ ತಿಳಿದು ಬಂದಿದೆ. ಮಕ್ಕಳಿಲ್ಲದ ಮಿಥಿಲಾನಗರ ಜನಕ ಮಹಾರಾಜರು ಯಾಜ್ಞಾರ್ಥವಾಗಿ ಭೂಮಿಯನ್ನು ಉಳುತ್ತಿದ್ದಾಗ ಸೀತೆ ಸಿಕ್ಕಿದಳೆಂಬ ಅಂಶ

ಪುರಾಣೇತಿಹಾಸಗಳಿಂದ ತಿಳಿದು ಬಂದಿದೆ. ಮಹಾಪತಿವ್ರತೆಯಾದ ಸೀತೆ ವಿಷ್ಣುವಿನ ಅವತಾರವೂ, ಏಕಪತ್ನೀವ್ರತಸ್ಥನೂ ಆದ ಶ್ರೀ ರಾಮಚಂದ್ರನನ್ನು ವರಿಸಿದ್ದು ಶ್ರೀರಾಮಚಂದ್ರನ ಮಹಾತ್ಮೆ ಸೂರ್ಯ ಚಂದ್ರರು ಕಣ್ಮುಂದೆ ಇರುವಷ್ಟೇ ಸತ್ಯವಾಗಿದೆ. ಇದರಿಂದ ಶ್ರೀರಾಮಚಂದ್ರನೂ ಒಕ್ಕಲಿಗ ವಂಶಸ್ಥನಾಗಿದ್ದ ಎಂಬ ಅಂಶಕ್ಕೆ ಪುಷ್ಠಿದೊರೆಯುತ್ತದೆ.

ಕಾಮಸೂತ್ರ ಮಹಾಗ್ರಂಥಗಳಲ್ಲಿ ರಚಿಸಿದ ವಾತ್ಸಾಯನನು ತನ್ನ ಮಹಾಕಾವ್ಯದಲ್ಲಿ "ಗೌಡ"ರಾಜ್ಯದ ಬಗ್ಗೆ ಹೆಮ್ಮೆಯಿಂದ ಉಲ್ಲೇಖಿಸಿದ್ದು, ರಾಜಗುರು ಮಹಾಮಾತ್ಯ ಚಾಣಕ್ಯ ತನ್ನ ಬೃಹತ್ ಗ್ರಂಥದಲ್ಲಿ ಗೌಡ ರಾಜ್ಯದ ಬಗ್ಗೆ ಪ್ರಶಂಸಿಸಿರುವುದು ಪ್ರತಿಯೊಬ್ಬ ಒಕ್ಕಲಿಗ ವಂಶಸ್ಥನೂ ಹೆಮ್ಮೆಪಡುವ ವಿಷಯ. ಹಿಮಾಲಯ ಪರ್ವತದಿಂದ ಕನ್ಯಾಕುಮಾರಿಯವರೆಗೆ ತಮ್ಮ ಸಾಮ್ರಾಜ್ಯವನ್ನು ಸ್ಥಾಪಿಸಿ ಹೆಮ್ಮೆಯಿಂದ ಮೆರೆದ ಹಿರಿಮೆ ಒಕ್ಕಲಿಗ ವಂಶಸ್ಥರದು.

ಭರತಖಂಡದ ವಂಗ, ಕಳಿಂಗ, ಭೂತಾನ್, ಕಾಶ್ಮೀರ, ರಾಜ್ಯಗಳನ್ನೂ ಗೌಡವಂಶಸ್ಥ ಮಹಾರಾಜರು ಆಳಿದರೆಂಬುದಕ್ಕೆ ಸಾಕಷ್ಟು ಪುರಾವೆಗಳು ದೊರೆತಿವೆ. ತಲಕಾಡಿನ ಗಂಗರು, ಉತ್ತರ ಭಾರತದ ಒರಿಸ್ಸಾ, ಗುಜರಾತ್ ಮತ್ತು ಬಿಹಾರದವರೆಗೆ ತಮ್ಮ ಸಾಮ್ರಾಜ್ಯದ ಎಲ್ಲೆಯನ್ನು ವಿಸ್ತರಿಸಿದ ಬಗ್ಗೆ ಹಾಗೂ ಹಿಮಾಚಲ ಪರ್ವತದಲ್ಲಿ ತಮ್ಮ ಲಾಂಛನವನ್ನು ಹಾರಿಸಿದ ಬಗ್ಗೆ ಪುರಾವೆಗಳು ದೊರೆತಿವೆ. ಪ್ರಾಚೀನ ಶಾಸನಗಳ ಪ್ರಕಾರ ರಾಜಯಯಾತಿ ಪುತ್ರನಾದ ಪುರು ಮಹಾರಾಜ ಪುತ್ರ ಸಂತಾನವಿಲ್ಲದೆ ನೊಂದು ಗಂಗಾಮಾತೆಯನ್ನು ತನ್ನ ಪ್ರಾರ್ಥನೆಯಿಂದ ಸಂತೃಪ್ತಿಗೊಳಿಸಿ ಗಾಂಗೇಯನೆಂಬ ಪುತ್ರನನ್ನು ಪಡೆದದ್ದು ಐತಿಹಾಸಿಕ ದಾಖಲೆಗಳಿಂದ ತಿಳಿದು ಬರುತ್ತದೆ. ಈತನ ಮುಂದಿನ ತಲೆಮಾರಿನವರಾದ ವಿಶ್ವಕರ್ಮ ಮತ್ತು ಇಂಧ್ರಧ್ವಜರು ಇಂದ್ರದೇವನನ್ನು ಪ್ರಾರ್ಥಿಸಿ, 'ಐರಾವತ'ಎಂಬ ಮದಗಜವನ್ನು ಪಡೆದಿದ್ದು, ಆ ದಿವ್ಯ ಮದಗಜವನ್ನೇ ತಮ್ಮ ವಂಶದ ಲಾಂಛನವಾಗಿಸಿಕೊಂಡದ್ದು ತಿಳಿದು ಬರುತ್ತದೆ. ತದನಂತರ 350ರಿಂದ1025ರವರೆಗೆ ಕರ್ನಾಟಕವನ್ನು ಆಳಿದ ಒಕ್ಕಲಿಗ ವಂಶಸ್ಥರಾದ ಗಂಗರ ಆಳ್ವಿಕೆ ಚಿರಸ್ಮರಣೀಯ ಎಂದು ಐತಿಹಾಸಿಕ ದಾಖಲೆಗಳಿಂದ ಸ್ಪಷ್ಟವಾಗಿರುತ್ತದೆ. ಗಂಗರು ಆಳಿದ ನಾಡನ್ನು ಗಂಗವಾಡಿ ಅಥವಾ ಗಂಗನಾಡು ಎಂದು ಕರೆಯಲಾಗಿತ್ತು ಎಂದು ತಿಳಿದು ಬರುತ್ತದೆ.

ಕಾವೇರಿ ನದಿತೀರದ ತಲಕಾಡು ಗಂಗವಂಶಸ್ಥರ ಆಡಳಿತ ಕೇಂದ್ರ ಬಿಂದುವಾಗಿದ್ದುದು ಸ್ಪಷ್ಟವಾಗಿದೆ. ಗಂಗರೂ ಕೂಡ 'ಮದಗಜವನ್ನೇ'ತಮ್ಮ ಲಾಂಛನವಾಗಿಸಿಕೊಂಡಿದ್ದು, ಮಾಗಡಿ ಕೆಂಪೇಗೌಡ ವಂಶಸ್ಥರೂ ಈ ಲಾಂಛನವನ್ನೇ ಕಾಪಾಡಿಕೊಂಡಿದ್ದಾರೆ ಎಂದು ತಿಳಿದು ಬರುತ್ತದೆ. ಗಂಗ ವಂಶದ ಮೂಲ ಪುರುಷ ದಡಗನಿಗೆ ಧರ್ಮಮಹಾರಾಜನೆಂದು ಬಿರುದು ದೊರತಿದೆ. ಮೂರನೆಯ ಮಾಧವನಿಗೆ ಕದಂಬರಾಜ ಕಾಕುತ್ಸ್ಯವರ್ಮ ತನ್ನ ಮಗಳನ್ನು ಧಾರೆಯರೆದು ವೈವಾಹಿಕ ಸಂಬಂಧ ಬೆಳೆಸಿದ್ದು ತಿಳಿದು ಬರುತ್ತದೆ. ಸಕಲ ವಿದ್ಯಾಪಾರಂಗತನಾದ ಅವಿನೀತ ಮಹಾರಾಜ 40ವರ್ಷಕಾಲ ರಾಜ್ಯ ಭಾರ ಮಾಡಿದ ಇತಿಹಾಸವಿದೆ. ನೀತಿಶಾಸ್ತ್ರವಕ್ಷಪ್ರಯೋಕ್ಷ ಕುಶಲ ಎಂಬ ಬಿರುದಾಂಕಿತನಾದ ದುರ್ವಿನೀತ ತನ್ನ ಮಗಳನ್ನು ಚಾಲುಕ್ಯರಿಗೆ ವಿವಾಹ ಮಾಡಿಕೊಡುವುದರೊಂದಿಗೆ ಚಾಲುಕ್ಯರೂ ಒಕ್ಕಲಿಗರಾಗಿದ್ದರು ಎಂದು ತಿಳಿಯಬಹುದಾಗಿದೆ. ಗಂಗವಂಶದ ಅತ್ಯುತ್ತಮ ಮಹಾರಾಜರಲ್ಲೊಬ್ಬನಾದ ಶ್ರೀ ಪುರುಷ 63ವರ್ಷ ರಾಜ್ಯಭಾರ ಮಾಡಿ"ಗಜಶಾಸ್ತ್ರ"ಗ್ರಂಥ ರಚಿಸಿ ತನ್ನ ರಾಜಧಾನಿಯನ್ನು ಮಾಕುಂದದಿಂದ ಮಾನ್ಯಪುರಕ್ಕೆ ಬದಲಾಯಿಸಿದ್ದಾಗಿ ತಿಳಿದು ಬರುತ್ತದೆ. ಎರಡನೇ ಶಿವಮಾರ ಶ್ರವಣಬೆಳಗೊಳದ ಜೈನಬಸದಿಯನ್ನು ಸ್ಥಾಪಿಸಲು ಕಾರಣಕರ್ತನಾದುದಲ್ಲದೇ "ಗಜಶಾಸ್ತ್ರ" ಹಾಗೂ "ಸೇತುಬಂಧು" ಗ್ರಂಥಗಳನ್ನು ರಚಿಸಿದ್ದಾಗಿ ತಿಳಿದು ಬರುತ್ತದೆ. ರಾಷ್ಟ್ರಕೂಟ ವಂಶಸ್ಥ ಅಮೋಘ ವರ್ಷ ಗಂಗರೊಡನೆ ಯುದ್ಧದಲ್ಲಿ ಸೋತನಂತರ ತನ್ನ ಮಗಳನ್ನು ಗಂಗವಂಶದ ಎರೆಯಂಗನ ಮಗ ತೂಬುಗನಿಗೆ ವಿವಾಹ ಮಾಡಿಕೊಟ್ಟು ಸಂಬಂಧ ಬೆಳೆಸಿದ್ದಾಗಿ ತಿಳಿದು ಬರುತ್ತದೆ. ಎರಡನೇ ತೂಬುಗನು 'ಗಂಗಗಂಗೇಯ' 'ನನ್ನೀಯಗಂಗ', ಎಂಬ ಬಿರುದಾಕಿಂತನಾಗಿದ್ದನಲ್ಲದೇ 'ಮಹಾರಾಜಾಧಿರಾಜ' ಎಂಬ ಬಿರುದಾಂಕಿತನಾಗಿದ್ದನು ಎಂಬ ವಿಷಯ ದಾಖಲಾಗಿದೆ. ಗಂಗರ ಆಸ್ಥಾನದಲ್ಲಿ ಮಹಾಮಂತ್ರಿ ಹಾಗೂ ದಂಡನಾಯಕನೂ ಆಗಿದ್ದ ಚಾವುಂಡರಾಯ 981-982ರಲ್ಲಿ ಶ್ರವಣಬೆಳಗೊಳದಲ್ಲಿ ವಿಶ್ವ ವಿಖ್ಯಾತ ಗೊಮ್ಮಟೇಶ್ವರ ವಿಗ್ರಹವನ್ನು ಕೆತ್ತಿಸಿದನೆಂದು ತಿಳಿದು ಬರುತ್ತದೆ. ಇದರಿಂದ ಗಂಗರು ಜೈನ ಮತಾವಲಂಬಿಗಳಾಗಿದ್ದರು ಎಂದು ತಿಳಿದು ಬರುತ್ತದೆ.

ಗಂಗವಂಶಸ್ಥರಾದ ಶ್ರೀ ಪುರುಷ, ದುರ್ವಿನೀತ, ಶಿವಮಾರ, ಚಾವುಂಡರಾಯರು ಸ್ವತಃ ವಿದ್ವಾಂಸರಾಗಿದ್ದರು ಹಾಗೂ ದುರ್ವಿನೀತ ಸಂಸ್ಕೃತ ಪಂಡಿತನೂ ಕೂಡ. ಈತ ವಡ್ಡಕಥಾ ಮತ್ತು ಬೃಹತ್ ಗ್ರಂಥಗಳನ್ನು ಸಂಸ್ಕೃತಕ್ಕೆ ಭಾಷಾಂತರಿಸಿದ್ದಾನೆಂಬ ಅಂಶ ದೃಢಪಟ್ಟಿದೆ. ಕಿ.ಶ.1066ರಲ್ಲಿ ಚಾಲುಕ್ಯ ದೊರೆವಿಕ್ರಮಾದಿತ್ಯನು ಉತ್ತರ ಭಾರತದ ಮೇಲೆ ದಂಡೆತ್ತಿ ಹೋದಾಗ ಉತ್ತರದಲ್ಲಿ ಗೌಡ ವಂಶಸ್ತರು ಮಿಥಿಲಾನಗರಿಯನ್ನು ಆಳುತ್ತಿದ್ದರೆಂದೂ ಇದು 'ಗೌಡರಾಜ್ಯ 'ವೆಂದೇ ಪ್ರಸಿದ್ಧಿಯಾಗಿತ್ತೆಂದೂ ಐತಿಹಾಸಿಕ ಪುರಾವೆಗಳು ದೊರೆಯುತ್ತವೆ. ಈ ಮನೆತನದ ಗಂಗದೇವನ ನಂತರದ ಗೌಡವಂಶದ ಅಂತಿಮ ದೊರೆ ಗಂಗರಸ ಕ್ರಿ.ಶ.1324ರವರೆಗೆ ರಾಜ್ಯಭಾರ ಮಾಡಿದ್ದಲ್ಲದೆ, ಚಾಲುಕ್ಯರು ಗಂಗರೊಂದಿಗೆ ಸ್ನೇಹ ಬೆಳೆಸಿರುವುದಾಗಿ ತಿಳಿದು ಬರುತ್ತದೆ. ಮಿಥಿಲಾದೇಶದ ಜನಕಮಹಾರಾಜ, ಸತ್ಯಹರಿಶ್ಚಂದ್ರ, ಗಾಂಗೇಯ, ತಲಕಾಡಿನ ಗಂಗರು, ಕದಂಬರು, ಚಾಲುಕ್ಯರು, ರಾಷ್ಟ್ರಕೂಟರು, ಹೊಯ್ಸಳರು, ಮಾಗಡಿ ಕೆಂಪೇಗೌಡರು ಇತ್ಯಾದಿಯಾಗಿ ಎಲ್ಲರೂ ಒಕ್ಕಲಿಗ ವಂಶಸ್ಥರಾಗಿದ್ದುದು

ಸ್ಪಷ್ಟವಾಗಿದೆ. ತಲಕಾಡು ಗಂಗರು ಕಾವೇರಿ ನದೀ ಕಣಿವೆಯ ತಲಕಾಡಿನಿಂದ ಉತ್ತರ ಭಾರತದೊಂದಿಗೆ ತಮಿಳುನಾಡಿಗೂ ವಲಸೆ ಹೋಗಿ ಅಲ್ಲಿ ನೆಲೆಸಿ 'ಒಕ್ಕಲಿಗ ರಾಜ್ಯ' ಸ್ಥಾಪನೆ ಮಾಡಿರುವುದಕ್ಕೆ ಸಾಕಷ್ಟು ಪುರಾವೆ ದೊರೆತಿದೆ.

ಗಂಗಕುಲದ ಒಕ್ಕಲಿಗ ವಂಶಸ್ಥರಾದ ರಣಭೈರೇಗೌಡರು ಕಂಚಿ ಪ್ರಾಂತದ ಪುತ್ತೂರಿನ ಯಣಮಂಜಿ ಪಾಳೇಯಗಾರನ ಉಪಟಳಕ್ಕೆ ಬೇಸತ್ತು ಅಲ್ಲಿಂದ ಮೈಸೂರಿಗೆ ಬಂದು ನಂದೀದುರ್ಗದ ತಪ್ಪಲಿನಲ್ಲಿ ನೆಲೆಸಿ, ಯಲಹಂಕದ ಪಾಳೇಗಾರರನ್ನು ಮಟ್ಟಹಾಕಿ ಅಲ್ಲಿ ತಮ್ಮ ಪ್ರಭುತ್ವ ಸ್ಥಾಪಿಸಿದುದೇ ಅಲ್ಲದೆ, ತಮ್ಮ ಸುರಕ್ಷತೆ ದೃಷ್ಟಿಯಿಂದ ಇವರ ವಂಶಜರು ಮಾಗಡಿಗೆ ತಮ್ಮ ರಾಜಧಾನಿಯನ್ನು ಬದಲಾಯಿಸಿರುವುದು ಎಲ್ಲರಿಗೂ ತಿಳಿದಿರುವ ವಿಷಯವೇ ಆಗಿದೆ.

"ಆಡು ಮುಟ್ಟದ ಸೊಪ್ಪಿಲ್ಲ. ಕವಿ ಅರಿಯದ ವಿಷಯವಿಲ್ಲ" ಎಂಬ ನಾಣ್ಣುಡಿಯಂತೆ "ಒಕ್ಕಲಿಗ" ವಂಶಸ್ಥರು ಆಳದ ಪ್ರಾಂತ್ಯವಿಲ್ಲ ದುಡಿಯದ ಕ್ಷೇತ್ರವಿಲ್ಲ ರಕ್ಷಿಸದ ಧರ್ಮವಿಲ್ಲ ಪೋಷಿಸದ ವಿದ್ವಾಂಸರಿಲ್ಲಮಾಡದ ದಾನವಿಲ್ಲ ಎಂದು ಅನೇಕ ದಾಖಲೆಗಳಿಂದ ತಿಳಿದು ಬಂದಿದೆ. ಇದರಿಂದ ಒಕ್ಕಲಿಗ ಜನಾಂಗ ಯಾರಿಗೂ ಯಾವುದರಲ್ಲೂ ಕಡಿಮೆ ಇಲ್ಲವೆಂದು ತಿಳಿಯುತ್ತದೆ.

ಕ್ರಿ.ಶ. 340ರಿಂದ 1024ರವರೆಗೆ ಮೈಸೂರು, ತಮಿಳುನಾಡು, ಆಂಧ್ರಪ್ರದೇಶದ ಹಾಗೂ ಕಳಿಂಗ ರಾಜ್ಯಗಳೊಂದಿಗೆ ಮಿಥಿಲಾನಗರಿಯನ್ನು ಆಳಿದ ಒಕ್ಕಲಿಗ ಮಹಾಪ್ರಭುಗಳು ತಲಕಾಡು ಗಂಗವಂಶಕ್ಕೆ ಸೇರಿದವರೆಂದು ತಿಳಿದು ಬರುತ್ತದೆ. ಉತ್ತರ ಭಾರತದಲ್ಲೂ ಒಕ್ಕಲಿಗ ವಂಶಸ್ಥರಾದ ಇಕ್ಷ್ವಾಕು ಗಂಗರು, ಮಾಗಡಿ ಕೆಂಪೇಗೌಡ ವಂಶಸ್ಥರು ಬೇರಾವುದೇ ರಾಜವಂಶಸ್ಥರು ಆಳದಷ್ಟು ದೀರ್ಘಕಾಲ ಭರತಖಂಡವನ್ನು ಆಳಿದ್ದಾರೆ.

ಹೊಯ್ಸಳರ ದೊರೆ ವಿಷ್ಣುವರ್ಧನ ಮಹಾಮಾತ್ಯ ಗಂಗರಸ ಮೂಲತಃ ತಲಕಾಡಿನ ಗಂಗವಂಶಕ್ಕೆ ಸೇರಿದವರು."ಯಲಹಂಕ ಪ್ರಭು"ಗಳೆಂದೇ ಮೈಸೂರಿನಲ್ಲಿ ಪ್ರಖ್ಯಾತರಾದಾ ರಣಭೈರೇಗೌಡರು ಹಾಗೂ ಅವರು ಮೂಲತಃ ತಲಕಾಡಿನ ಗಂಗವಂಶಸ್ಥರಾದರೂ, ಅವರ ಹಿರಿಯರು ತಲಕಾಡಿನಿಂದ ತಮಿಳುನಾಡಿಗೆ ವಲಸೆಹೋಗಿ ತಮಿಳರ ದೌರ್ಜನ್ಯಕ್ಕೆ ಬೇಸತ್ತು ನಂದಿಗೆ ಬಂದು ನೆಲೆಸಿದ್ದು ಚರಿತ್ರಾರ್ಹ. "ಯಲಹಂಕ ನಾಡ ಪ್ರಭು"ಗಳೆಂಬ ಬಿರುದಾಂಕಿತರಾದ ರಣಭೈರೇಗೌಡರು, ವಿಜಯನಗರ ಸಾಮ್ರಾಟರ ಮನ್ನಣೆಗೆ ಪಾತ್ರರಾದ ಕೆಂಪೇಗೌಡರು ಗಂಗವಂಶಸ್ಥ ಸಾಮ್ರಾಟರ ನಂತರ ಒಕ್ಕಲಿಗ ವಂಶಸ್ಥರ ಹಿರಿಮೆ ಗರಿಮೆಗಳನ್ನು ಮೆರೆದಿದ್ದಾರೆ. ಕ್ರಿ.ಶ. 757ರಲ್ಲಿ ರಾಷ್ಟ್ರಕೂಟರನ್ನು, ಬಾದಾಮಿ ಚಾಲುಕ್ಯರನ್ನು ಸದೆ ಬಡಿದು ಕಾವೇರಿಯಿಂದ ನರ್ಮದೆಯವರೆಗೆ ತಮ್ಮ ಸಾಮ್ರಾಜ್ಯ ಎಲ್ಲೆಯನ್ನು ವಿಸ್ತರಿಸಿ ತಮ್ಮ 'ಮದಗಜ'ಲಾಂಛನವನ್ನು ಒತ್ತುವುದರೊಂದಿಗೆ 'ರಾಷ್ಟ್ರಕೂಟ' ಯುಗವೆಂದು ಜಗಜ್ಜಾಹಿರಾತಾದವರು ಒಕ್ಕಲಿಗ ಜನಾಂಗದವರು ಎಂಬುದಕ್ಕೇ ಅನೇಕ ದಂತ ಕತೆಗಳಿವೆ.

ಹಿಂದೂಸನಾತನ ಭವ್ಯ ಸಂಸ್ಕೃತಿಯ ರಕ್ಷಣೆ ಹಾಗೂ ಪುನರುತ್ಥಾನದ ಹೊಣೆ ಹೊತ್ತ ಭರತ ಖಂಡದ ಏಕೈಕ ಹಿಂದೂ ರಾಜ್ಯವೆಂಬ ಹೆಗ್ಗಳಿಕೆ ಪಾತ್ರವಾಗಿದ್ದ ವಿಜಯನಗರ ಸಾಮ್ರಾಜ್ಯಕ್ಕೆ ದೆಹಲಿ ಸುಲ್ತಾನರಿಂದ ತೊಂದರೆ ಉಂಟಾದಾಗ ಆದರ ರಕ್ಷಣೆ ಮಾಡಿದ ಹೆಮ್ಮೆ ಒಕ್ಕಲಿಗ ವಂಶಸ್ಥರಾದ ಕೆಂಪೇಗೌಡರದು.

ವಿಜಯನಗರ ಸಾಮ್ರಾಜ್ಯ ರಕ್ಷಣೆಗೆ ಮನೆ ದೇವರಾದ ಸೋಮನಾಥನಿಗೆ ಪೂಜೆ ಸಲ್ಲಿಸಿ ಯುದ್ಧಕ್ಕೆ ಹೊರಟಾಗ ಕುದುರೆ ದಾರಿತಪ್ಪಿಗೊಂಡಾರಣ್ಯದ ಮಧ್ಯೆ ಕೊಂಡೊಯ್ದಾಗ, ಅಲ್ಲಿ ವಿಶ್ರಮಿಸುತ್ತಿದ್ದಾಗ ಪ್ರತ್ಯಕ್ಷರಾದ ರಾಜ ಋಷಿಯೊಬ್ಬರು. "ವೀರ ಕೆಂಪೇಗೌಡ ಈ ಪ್ರದೇಶದಲ್ಲಿ ಒಂದು ಸುಂದರ ನಗರಿಯನ್ನು ಸ್ಥಾಪಿಸು, ಇದು ನಿನ್ನಿಂದ ಸಾಧ್ಯ" ಎಂದು ಆಶೀರ್ವದಿಸುವುದರೊಂದಿಗೆ, ತಮ್ಮ ಗುರುಗಳಾದ ಮಾಧವ ಭಟ್ಟರ ವಿಜಯನಗರದಂತಹ ಮಹಾನಗರವನ್ನು ಕಟ್ಟಬೇಕೆಂದು ಬಹುದಿನಗಳ ಇಚ್ಛೆಯನ್ನು ಪೂರೈಸಲು ಕೆಂಪೇಗೌಡರು ಇದೇ ಅರಣ್ಯದಲ್ಲಿ ಬೆಂಗಳೂರು ಸ್ಥಾಪಿಸಿದ್ದು. ಇದು ಇಂದು ವಿಶ್ವ ವಿಖ್ಯಾತವಾಗಿರುವುದು. ಒಕ್ಕಲಿಗರ ವಂಶಸ್ಥರೆನಿಸಿಕೊಂಡಿರುವ ಗೌಡರ ಸಾಹಸ, ಕಾರ್ಯದಕ್ಷತೆ, ಶೌರ್ಯದ ಕುರುಹಾಗಿದೆ. ಮಹಾತ್ಯಾಗಿ ಲಕ್ಷ್ಮಿದೇವಿ, ಪತಿಪಾರಾಯಣೆಯರಾದ ಕೆಂಪಾಂಬೆ, ಸತಿಶಿರೋಮಣಿ ದೊಡ್ಡಾಂಬೆಯಂತಹ ಸತಿಶಿರೋಮಣಿಗಳಿಗೆ ಜನ್ಮ ನೀಡಿದ್ದು ಈ ಒಕ್ಕಲಿಗ ವಂಶ ಎಂಬುದರಲ್ಲಿ ಎರಡು ಮಾತಿಲ್ಲ. ಇಂದು ಕೆಂಪೇಗೌಡರು ನಿರ್ಮಿಸಿದ ಬೆಂಗಳೂರು, ಕೆಂಪೇಗೌಡರು ನಿಗಧಿಪಡಿಸಿದ ನಾಲ್ಕು ನಿರ್ದಿಷ್ಟ ಎಲ್ಲೆಗಳನ್ನೂ ಮೀರಿ ಸುಮಾರು 50 ಲಕ್ಷ ಜನಸಂಖ್ಯೆ ಹೊತ್ತು ನಿಂತಿದ್ದರೂ, ಇಲ್ಲಿನ ಜನಕ್ಕೆಲ್ಲಾ ನೆಲೆ ಕಲ್ಪಿಸಿ ನಿಲ್ಲಲು ಜಾಗ ನೀಡಿದ ಒಕ್ಕಲಿಗ ವಂಶಸ್ಥರೇ ಅನಾಥರಾಗುವ ದುಸ್ಥಿತಿ ಉಂಟಾಗಿದ್ದು, ಇಂದು ಬೆಂಗಳೂರಿನ ಜನಸಂಖ್ಯೆಯಲ್ಲಿ ಒಕ್ಕಲಿಗರ ಸಂಖ್ಯೆ ಕೇವಲ 6-7 ಲಕ್ಷಗಳಾಗಿರುವುದರಿಂದ ಸ್ಪಷ್ಟವಾಗಿದೆ. ಇದು ಇಡೀ ಒಕ್ಕಲಿಗ ಸಮುದಾಯ ತಲೆತಗ್ಗಿಸಲೇಬೇಕಾದ ವಿಷಯ.

ಬೆಂಗಳೂರು ನಗರದ ಮಧ್ಯದಲ್ಲಿ ಕೆಂಪೇಗೌಡ ವೃತ್ತದಲ್ಲಿ "ಅಣ್ಣಮ್ಮದೇವಿ" ಎಂದು ಪ್ರಸಿದ್ಧವಾಗಿರುವ ಅಣ್ಣಮ್ಮದೇವಿ ದೇವಸ್ಥಾನವನ್ನು ಕೆಂಪೇಗೌಡರು ಕಟ್ಟಿಸಿದ ಒಕ್ಕಲಿಗರ ವಂಶಸ್ಥರ ಕುಲದೇವತೆಯಾದ ಮಹಾಮಾತೆ ಕೆಂಪಾಂಬಿಕೆಯ ದೇವಸ್ಥಾನ ಎಂದು ತಿಳಿದು ಬಂದಿದೆ. ಆದರೆ "ಮಹಾತ್ಯಾಗಿ ಲಕ್ಷ್ಮೀದೇವಿಯ" ದೇವಸ್ಥಾನ ಹಾಗೂ ಸಮಾಧಿಗಳು ಸ್ವಾರ್ಥಿಗಳ ಅಕ್ರಮ ಚಟುವಟಿಕೆಗಳಿಂದ ಕಣ್ಮರೆ ಆಗುವ ಹಂತ ತಲುಪಿವೆ. ಇದರ ರಕ್ಷಣೆ ಕೇವಲ ಸ್ವಾಭಿಮಾನಿ ಒಕ್ಕಲಿಗರಿಂದ ಮಾತ್ರ ಸಾಧ್ಯ.

ಸುಮಾರು 1500ವರ್ಷಗಳ ಹಿಂದೆಯೇ ತಲಕಾಡಿನ ಗಂಗರಸರು ಮಾಗಡಿ ಕ್ಷೇತ್ರವನ್ನು ತಮ್ಮ ಅಧೀನ ರಾಜ್ಯವನ್ನಾಗಿ ಮಾಡಿಕೊಂಡಿದ್ದರು ಎಂಬ ಅಂಶ ತಿಳಿದು ಬರುತ್ತದೆ. ಆದರೆ

ಕ್ರಿ.ಶ.1125ರಲ್ಲಿ ಮಾಗಡಿ ಪ್ರಾಂತ್ಯದ ಚೋಳ ರಾಜವಂಶಸ್ಥರ ವಶವಾಯಿತು ಎನ್ನಲಾಗಿದೆ. ಕ್ರಿ.ಶ.1300ರಲ್ಲಿ ಅಪಾರನಾಡು ಸ್ಥಾಪಿಸಿದ ಕೆಂಪೇಗೌಡ ವಂಶಸ್ಥರು ಕ್ರಿ.ಶ.1638ರಲ್ಲಿ ತಮ್ಮ ರಾಜಧಾನಿಯನ್ನು ಬೆಂಗಳೂರಿನಿಂದ ಮಾಗಡಿಗೆ ಹಾಗೂ ಶಿವಗಂಗೆಗೆ ಬದಲಾಯಿಸಿಕೊಂಡರೆಂದು ತಿಳಿದು ಬರುತ್ತದೆ. ಕ್ರಿ.ಶ. 1658ರಲ್ಲಿ ಇಮ್ಮಡಿ ಕೆಂಪೇಗೌಡರ ಮಗ ಮುಮ್ಮಡಿ ಕೆಂಪೇಗೌಡ ಸಿಂಹಾಸನವೇರಿ ದಕ್ಷತೆಯಿಂದ ಆಡಳಿತ ನಡೆಸಿದ್ದು ತಿಳಿದು ಬರುತ್ತದೆ. ಮಾಗಡಿ ಕೆಂಪೇಗೌಡ ವಂಶಸ್ಥರ ಅವನತಿಯೊಂದಿಗೆ ರಾಜ್ಯದಲ್ಲಿ ಒಕ್ಕಲಿಗ ಸಮುದಾಯದ ಅವನತಿ ಪ್ರಾರಂಭವಾದದ್ದು. ಅಂದಿನಿಂದ ಇಂದಿನವರೆಗೆ ಈ ವಂಶ ಚಿಗುರೊಡೆದು ಸಾಮ್ರಾಜ್ಯ ಕಟ್ಟುವ ಕನಸಂತೂ ಇಂದಿಗೂ ಮಬ್ಬಾಗಿಯೇ ಉಳಿದಿದೆ.

ಒಕ್ಕಲಿಗರ ಮೂಲ ಉಗಮ ಸ್ಥಾನ ಕಾವೇರಿ ನದೀ ಕಣಿವೆಯ ತಲಕಾಡು ಉಪರಾಜಧಾನಿ ಮಾನ್ಯಪುರಿ, ಬಾದಾಮಿ, ಯಲಹಂಕ, ಮಾಗಡಿ ಶಿವಗಂಗೆ ಇತ್ಯಾದಿ 10ನೇ ಶತಮಾನದಲ್ಲಿ ಗಂಗರಸರು ರಾಷ್ಟ್ರಕೂಟರೊಂದಿಗೆ ವೈವಾಹಿಕ ಸಂಬಂಧ ಬೆಳೆಸಿ ಜೈನ ಧರ್ಮವನ್ನು ಸ್ವೀಕರಿಸಿದರೆಂದು ತಿಳಿದು ಬರುತ್ತದೆ. ಒಕ್ಕಲಿಗರಲ್ಲಿ ಸುಮಾರು 62 ಉಪಪಂಗಡಗಳಿದ್ದು(ಇತ್ತೀಚಿನ ಒಂದು ವರದಿ ಪ್ರಕಾರ102 ಉಪಪಂಗಡಗಳಿವೆ ಎಂದು ಗೊತ್ತಾಗಿದೆ)ಅವುಗಳಲ್ಲಿ ಗಂಗಟಿಕಾರರು, ಮೊರಸ ಒಕ್ಕಲಿಗರು. ಕುಂಚಿಟಗರು, ನಾಮಧಾರಿಗಳು, ಚೋಳ ಒಕ್ಕಲಿಗರು, ಬಂಟರು, ರೆಡ್ಡಿಗಳು, ಸ್ವಲ್ಪರು ಬೆರಳು ಕೊಡವವರು, ಕೊಡವ ಒಕ್ಕಲಿಗರು. ಶೆಟ್ಟಿ ಒಕ್ಕಲಿಗರು, ಬಂಟ ಒಕ್ಕಲಿಗರು ಇತ್ಯಾದಿ.....ಮುಖ್ಯವಾದವು. ಗಂಗರು ಎಂಬ ಪದದಿಂದ "ಗಂಗಟಿಗಾರರು"ಎಂಬ ಪದ ಅಥವಾ ಜಾತಿ ಹುಟ್ಟಿತೆಂಬ ನಂಬಿಕೆ ಇದ್ದು. ಒಕ್ಕಲಿಗ ವಂಶಸ್ಥರಾದ ಗಾವುಂಡ ಎಂಬ ರಾಜನಿಂದ"ಗೌಡ"ಎಂಬುದು ರೂಢಿಗೆ ಬಂದಿತೆನ್ನಲಾಗಿದೆ.

ಕ್ರಿ.ಶ.360ರಿಂದ 1025ರವರೆಗೆ ರಾಜ್ಯದ ಇತಿಹಾಸದಲ್ಲಿ ಮೆರೆದು, ತದನಂತರ ಮರೆಯಾದ ಗಂಗವಂಶಸ್ಥರೊಂದಿಗೆ ಅವನತಿ ಹೊಂದಿದ್ದ ಒಕ್ಕಲಿಗ ವಂಶ ಕ್ರಿ.ಶ1300 ರಿಂದ ಕೆಂಪೇಗೌಡರ ವಂಶದ ಮೂಲಕ ಮತ್ತೆಗಂಗರ'ಮದಗಜ' ಲಾಂಛನದೊಂದಿಗೆ ಮೈಸೂರು ರಾಜ್ಯದಲ್ಲಿ ಪ್ರಾಬಲ್ಯವಾಗಿ ಬೆಂಗಳೂರನ್ನು ಕಟ್ಟಿ18ನೇ ಶತಮಾನದವರೆಗೂ ರಾಜ್ಯವನ್ನು ಆಳಿದ ಹೆಮ್ಮೆಗೆ ಒಕ್ಕಲಿಗ ರಾಜವಂಶಸ್ತರು ಪಾತ್ರರಾಗಿದ್ದಾರೆ. ಅವರ ನಂತರ ರಾಜ್ಯದಲ್ಲಿ ಒಕ್ಕಲಿಗರ ಇತಿಹಾಸಕ್ಕೆ ಮಬ್ಬು ಕವಿದಿವೆ ಎನ್ನಬಹುದಾಗಿದ್ದು. ಇದರಲ್ಲಿ ಯಾವುದೇ ಉತ್ಪ್ರೇಕ್ಷೆಯಿಲ್ಲ ಎನ್ನುವುದಂತೂ ಸ್ಪಷ್ಟ. ಇದನ್ನು ನೀವೇ ಯೋಚಿಸಿ ನೋಡಿ.

20ನೇ ಶತಮಾನದಲ್ಲಿ ಸ್ವಾತಂತ್ರ್ಯ ಹೋರಾಟದಲ್ಲಿ ಸಕ್ರಿಯವಾಗಿ ಪಾಲ್ಗೊಂಡ ಮುಖಂಡರಲ್ಲಿ ಬಹುತೇಕ ಒಕ್ಕಲಿಗ ವಂಶಸ್ಥರೇ ಹೆಚ್ಚೆನ್ನಬಹುದು. ಸ್ವಾತಂತ್ರ್ಯಾನಂತರ ರಾಜ್ಯದ ರಾಜಕೀಯದಲ್ಲಿ ಮಿನುಗಿದ ರಾಜಕೀಯ ಧ್ರುವ ತಾರೆಗಳಲ್ಲಿ ಕೆ.ಸಿ.ರೆಡ್ಡಿ, ಕೆಂಗಲ್ ಹನುಮಂತಯ್ಯ, ಕಡಿದಾಳ್ ಮಂಜಪ್ಪ, ಶಾಂತವೇರಿ ಗೋಪಾಲಗೌಡ, ಕೆ.ಹೆಚ್.ರಾಮಯ್ಯ, ಕೆ.ವಿ. ಶಂಕರೇಗೌಡ, ಹೆಚ್.ಕೆ.ವೀರಣ್ಣಗೌಡ, ಹೆಚ್.ಡಿ.ದೇವೇಗೌಡ, ಶ್ರೀಎಸ್.ಎಂ.ಕೃಷ್ಣ ಮುಂತಾದವರು ಪ್ರಮುಖರು. ಒಕ್ಕಲಿಗ ವಂಶಸ್ಥರಿಗೆ ದೇವೇಗೌಡರ ಮುಖೇನ ರಾಜ್ಯ ಹಾಗೂ ರಾಷ್ಟ್ರದ ಚುಕ್ಕಾಣಿಯನ್ನು ಹಿಡಿಯುವ ಸೌಭಾಗ್ಯ ದೊರಕಿದ್ದು ನಿಜಕ್ಕೂ ಒಕ್ಕಲಿಗರ ರಾಜಮನೆತನದ ಹೆಗ್ಗುರುತಿನ ಸಂಕೇತವಾಗಿದೆ. ಚಾರಿತ್ರಿಕ ಯುಗದಲ್ಲಿ ಇಡೀ ರಾಷ್ಟ್ರವನ್ನು ಒಟ್ಟಾಗಿ ಯಾವುದೇ ರಾಜವಂಶಸ್ಥರೂ ಆಳುವ ಸದಾವಕಾಶ ದೊರೆಯದಿದ್ದರೂ, ದೇವೇಗೌಡರಿಗೆ ಪ್ರಧಾನಿಯ ರೂಪದಲ್ಲಿ ಇಡೀ ಭರತ ಖಂಡದ ಚಕ್ರಾಧಿಪತ್ಯ ದೊರೆತದ್ದು ಒಕ್ಕಲಿಗ ಸಮುದಾಯಕ್ಕೆ ಹೆಮ್ಮೆ ವಿಷಯವೇ ಸರಿ. ವಿಶ್ವದಲ್ಲೇ ಪ್ರಪ್ರಥಮ ಎನಿಸುವ ವಿಧಾನ ಸೌಧವನ್ನು ಕಟ್ಟಿಸಿ ತಮ್ಮ ದಕ್ಷ ಆಡಳಿತದೊಂದಿಗೆ ಒಕ್ಕಲಿಗರ ಇತಿಹಾಸಕ್ಕೆ ಮೆರುಗು ನೀಡಿದವರು ಒಕ್ಕಲಿಗ ವಂಶಸ್ಥರಾದ ಕೆಂಗಲ್ ಹನುಮಂತಯ್ಯನವರು ಇಡೀ ಜಗತ್ತೇ ನೋಡುವಂತೆ ಮಾಡಿದ್ದಾರೆ. ದಕ್ಷ ಆಡಳಿತಕ್ಕೆ ಹೆಸರಾದ ಕರ್ನಾಟಕವನ್ನು ಮಾಹಿತಿ ತಂತ್ರಜ್ಞಾನದ ಮೂಲಕ ಹೆಸರು ಮಾಡಿರುವವರು ಶ್ರೀ.ಎಸ್.ಎಂ.ಕೃಷ್ಣರವರು.

ಐತಿಹಾಸಿಕ ಪುರಾವೆಗಳಿಂದ ಶತಶತಮಾನಗಳಿಂದ ಭರತಖಂಡವನ್ನು ಒಕ್ಕಲಿಗ ವಂಶಸ್ಥರು ಶೌರ್ಯ, ಪರಾಕ್ರಮ, ಸಾಹಸ, ಜನಾನುರಾಗ, ಸರ್ವಧರ್ಮ ಸಹಿಷ್ಣುತೆ, ವಿನಯ, ಪಾಂಡಿತ್ಯದೊಂದಿಗೆ ದಕ್ಷ ಆಡಳಿತ ನೀಡಿ ಸತ್ಯ, ಧರ್ಮ, ನೀತಿ ನ್ಯಾಯಗಳ ಪ್ರತೀಕವಾಗಿದ್ದರೆಂದು ತಿಳಿದು ಬಂದಿರುವುದೇ ಅಲ್ಲದೆ , ದುಷ್ಟಸಂಹಾರಕರೂ, ಸ್ವಯಂ ವಿದ್ವಾಂಸರೂ ಆಗಿದ್ದರೆಂಬ ಅಂಶ ತಿಳಿದುಬಂದಿದೆ. ಇಂತಹ ಭವ್ಯ ಪರಂಪರೆಯುಳ್ಳ ಒಕ್ಕಲಿಗ ಸಮುದಾಯ ಇತ್ತೀಚಿನ ವರ್ಷಗಳಲ್ಲಿ ರಾಜಕೀಯ ಮುಖಂಡರ ಒಳಜಗಳದಿಂದ, ಮಿತಿಮೀರಿದ ಸ್ವಾರ್ಥದಿಂದ, ಸಾಮರಸ್ಯ ಹಾಗೂ ನಾಯಕನನ್ನು ಹೊಂದಿಲ್ಲ ಎಂಬ ಅಂಶ ಸ್ಪಷ್ಟವಾಗಿದ್ದು, ಇಂತಹ ಧೀಮಂತ ಸಮುದಾಯ ಇಂದು ನಾಯಕನಿಲ್ಲದ ತಬ್ಬಲಿಯಾಗಿದೆ ಎನ್ನುವುದರಲ್ಲಿ ಎರಡು ಮಾತಿಲ್ಲ . ಹಿರಿಯ ನಾಯಕರಲ್ಲಿ ಸಮುದಾಯದ ಜನತೆಯ ಬಗ್ಗೆ ಕಿಂಚಿತ್ತೂ ಕಾಳಜಿ ಇಲ್ಲ ಎಂಬುದು ಸಾರ್ವಜನಿಕ ಅಭಿಪ್ರಾಯ , ಇನ್ನು ಎರಡನೇ ಪಂಕ್ತಿಯ ನಾಯಕರ ಕೊರತೆಯಂತೂ ಈ ಸಮುದಾಯದ ಯುವಶಕ್ತಿಯನ್ನು ಕಾಡುತ್ತಿದ್ದು, ಯುವಶಕ್ತಿ ಕಂಗಾಲಾಗಿದ್ದಾರೆ. ಒಕ್ಕಲಿಗ ನಾಯಕರ ಬೀದಿಜಗಳ ಬೇರೆಯವರಿಗೆ ತಮಾಷೆಯ ವಿಷಯವಾಗಿದ್ದು, ಒಕ್ಕಲಿಗರ ಮರ್ಯಾದೆ ಬೀದಿರಂಪವಾಗಿದೆ. ಇನ್ನು ಕೆಲವು ಅಧಿಕಾರಿಗಳಂತೂ ಒಕ್ಕಲಿಗರೆಂದು ಗುರ್ತಿಸಿಕೊಳ್ಳುವುದಕ್ಕೆ ಇಷ್ಟಪಡದ ಪ್ರವೃತ್ತಿ ಬೆಳೆಸಿಕೊಂಡಿದ್ದಾರೆ. ಕೆಲವು ಅಧಿಕಾರಿಗಳ ಸೌಜನ್ಯರಹಿತ ನಡತೆಯೂ ಇಡೀ ಒಕ್ಕಲಿಗ ಸಮುದಾಯವೇ ತಲೆ ತಗ್ಗಿಸುವಂತಹ ಮಟ್ಟ ತಲುಪಿದೆ. ಒಕ್ಕಲಿಗ ಸಮುದಾಯ ಚಾರಿತ್ರಿಕ

ಸ್ವಾರ್ಥಪರ ರಾಜಕಾರಣಿಗಳು ಮತ್ತು ಅಭಿಮಾನರಹಿತ ಅಧಿಕಾರಿಗಳ ಮಧ್ಯೆ ಸಿಲುಕಿ, ಈ ವಂಶದ ಜನಸಾಮಾನ್ಯರು ತಮ್ಮ ಸಮುದಾಯದೊಂದಿಗೆ ಬೆರೆಯುವ ಅಥವಾ ಗುರುತಿಸಿಕೊಳ್ಳುವುದಕ್ಕೆ ಹಿಂಜರಿಯುತ್ತಿರುವ ಪ್ರವೃತ್ತಿನೋಡಿದರೆ ಈ ಸಮುದಾಯ ಭವಿಷ್ಯವಿಲ್ಲದ ಹಂತ ತಲುಪಲಿದೆಯೋ ಎಂಬ ಅನುಮಾನ ಕಾಡುತ್ತದೆ.

ಈ ಧೀಮಂತ ಸಮುದಾಯದ ಉಳಿವಿಗೆ ಮಹಾಮಾತ್ಯ ಚಾಣಕ್ಯನಂತೆ ಧೀಕ್ಷೆತೊಟ್ಟು ಮುಂದಿನ ಅತ್ಯುನ್ನತ ಯುವ ನಾಯಕರನ್ನು ಗಂಗರು ಮತ್ತು ಕೆಂಪೇಗೌಡರು ಪ್ರತಿಷ್ಠೆಗಳನ್ನು ಮೆರೆಸುವಂತಹ ಧೀಮಂತ ನಾಯಕರನ್ನು ಸೃಷ್ಟಿ ಮಾಡಿದಾಗ ಮಾತ್ರ ಈ ಸಮುದಾಯದ ಪುನರುಜ್ಜೀವನ ಸಾಧ್ಯ. ಸಮುದಾಯದ ಚಿಂತಕರಾದ ಯುವ ನಾಯಕರನ್ನು ಗುರುತಿಸಿ ಅವರಿಗೆ ಮಾರ್ಗದರ್ಶನ ನೀಡಬೇಕಾಗಿದೆ. ಸಮಾಜದಲ್ಲಿ ಇನ್ನೂ ಹತ್ತಾರು ದುರ್ಯೋಧನರನ್ನು ಹುಟ್ಟಿಹಾಕುವ ಬದಲು, ಒಬ್ಬ ಸತ್ಯ ಹರಿಶ್ಚಂದ್ರ, ಒಬ್ಬ ಧರ್ಮರಾಯನನ್ನು ಪ್ರತಿನಿಧಿಸುವ ಒಕ್ಕಲಿಗ ನಾಯಕನನ್ನು ಸೃಷ್ಟಿಸಿದರೆ ಇಡೀ ಸಮುದಾಯದ ಕೊಳೆನಾಶವಾಗುತ್ತದೆ. ಒಕ್ಕಲಿಗ ಜಾತಿಯ ಯುವಜನಾಂಗ ಆತ್ಮ ವಿಮರ್ಶೆ ಮಾಡಿಕೊಳ್ಳಬೇಕಾದ ಪರ್ವಕಾಲ ಇದು. ಒಕ್ಕಲಿಗ ಜಾತಿಯಲ್ಲಿ ಹುಟ್ಟಿ ಒಕ್ಕಲಿಗ ಎಂದು ಗುರುತಿಸಿಕೊಳ್ಳಬಯಸದ ನೀಚತನಕ್ಕಿಂತ ಹೆಚ್ಚಿನದೇನು ಇರಲಾರದು ಇರಲಾದು. ಜನಾಂಗದಲ್ಲಿ ಮುನ್ನುಗ್ಗಿ ಒಳ್ಳೆಯ ಕೆಲಸಗಳನ್ನು ಮಾಡುವವರನ್ನು ಕಾಲೆಳೆಯುವ, ಅವರ ಬಗ್ಗೆ ಅಪ ಪ್ರಚಾರ ಮಾಡುವ ದುಷ್ಟರನ್ನು ಹೇಡಿಗಳನ್ನು ಗುರುತಿಸಿ ಅವರಿಗೆ ಛೀಮಾರಿ ಹಾಕಿ ಅವರನ್ನು ಸದೆ ಬಡಿಯದಿದ್ದರೆ ಜನಾಂಗದ ಸಂಘಟನೆಗೆ ಮಾರಕವಾಗುತ್ತದೆ. ಹೊತ್ತಭೂಮಿ, ಹೆತ್ತತಾಯಿ, ಜನಿಸಿದ ಜಾತಿಯನ್ನು ಸ್ಮರಿಸದಾತ, ಇತಿಹಾಸವನ್ನು ಮರೆತವ ಸಮಾಜಕ್ಕೆ, ಸಮಾಜದ ಒಳಿತಿಗೆ, ಹುಟ್ಟಿದ ನಾಡಿಗೆ, ಜನ್ಮ ನೀಡಿದವರಿಗೆ ಯಾವುದೇ ಕೊಡುಗೆಯನ್ನು ನೀಡಲಾರ ಎಂಬುದಂತೂ ಸ್ಪಷ್ಟ. ಒಕ್ಕಲಿಗರೆಂದು ಗುರುತಿಸಿಕೊಂಡ ತಕ್ಷಣ ಬೇರೆಯವರ ಕೆಂಗಣ್ಣಿಗೆ ಗುರಿಯಾಗಬೇಕಾಗುತ್ತದೆ, ಮನ್ನಣೆ ದೊರೆಯಲಾರದು ಎಂಬುದನ್ನು ಮರೆತು ಬಲಿಷ್ಠ ಒಕ್ಕಲಿಗ ಸಮುದಾಯ ಕಟ್ಟಲು ಮುಂದೆ ಬನ್ನಿ. ಗಂಗರು, ಕೆಂಪೇಗೌಡ ವಂಶಸ್ಥರು ಇನ್ನೂ ಬದುಕಿದ್ದಾರೆ. ಅವರ ರಕ್ತ ಒಕ್ಕಲಿಗರಲ್ಲಿ ಹರಿಯುತ್ತಿದೆ, ಅವರ ಧೀಮಂತಿಕೆ ಇನ್ನೂ ಜೀವಂತವಾಗಿದೆ. ಒಕ್ಕಲಿಗರಲ್ಲಿ ಅವರ ಪೂರ್ವಜರ ಗುಣಾವಶೇಷಗಳು ತುಂಬಿತುಳುಕುತ್ತಿವೆ ಎಂಬುದನ್ನು ಜನಸಮುದಾಯಕ್ಕೆ ಮನವರಿಕೆ ಮಾಡಿಕೊಟ್ಟು ಮಣ್ಣುಮುಕ್ಕಿರುವ ಒಕ್ಕಲಿಗ ಸಮುದಾಯ ಗೌರವವನ್ನು ಗಗನದೆತ್ತರಕ್ಕೆ ಹಾರಿಸಿ, ಮತ್ತೊಮ್ಮೆ ಗೌಡವಂಶದ ಭವ್ಯ ಇತಿಹಾಸವನ್ನು ಮೆರೆಸೋಣ ಬನ್ನಿ.

## ಗೌಡ ರಾಜ್ಯ

ಪ್ರಾಚೀನ ಕಾಲದಲ್ಲಿ ಗೌಡ ರಾಜ್ಯವಿತ್ತೆಂದೂ, ಅದು ತ್ರೇತಾಯುಗದಲ್ಲಿಯೇ ಪ್ರಸಿದ್ಧಿ ಪಡೆದಿತ್ತೆಂದು ಕೆಲವು ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ ಅಂತೆಯೇ ಪ್ರಾಚೀನ ಕಾಲದಲ್ಲಿ ಕಾಮಸೂತ್ರಗಳನ್ನು ಬರೆದ ವಾತ್ಸಾಯನನು ತನ್ನ ಗ್ರಂಥದಲ್ಲಿ ತಿಳಿಸಿರುವಂತೆ ಹಿಮಾಲಯದ ತಪ್ಪಲಿನಲ್ಲಿ ಗಂಡಕಿ-ಗಂಗಾನದಿಗಳ ಬಯಲು ಪ್ರದೇಶದಲ್ಲಿ ಜನಕ ಮಹಾರಾಜನು ಆಳಿದ ಮಿಥಿಲಾ ನಗರವೇ ಗೌಡರಾಜ್ಯವಾಗಿತ್ತು. ಪಾಣಿನಿ ಮತ್ತು ಕೌಟಿಲ್ಯರು(ಚಾಣಕ್ಯ)ಕೂಡ ತಮ್ಮ ಗ್ರಂಥಗಳಲ್ಲಿ ಗೌಡರಾಜ್ಯವನ್ನು ಕುರಿತು ಬರೆದಿದ್ದಾರೆ.

2000ವರ್ಷಗಳ ಹಿಂದೆಯೇ ಗುಣಾಢ್ಯನೆಂಬ ಮಹಾಕವಿ ಪೈಶಾಚಿ ಭಾಷೆಯಲ್ಲಿ ಒಂಭತ್ತು ಲಕ್ಷ ಕಥೆಗಳು ಬರೆದನಂತೆ . ಬೃಹತ್ ಕಥೆಗಳ ಈ ಮಹಾಗ್ರಂಥವು ಪ್ರಪಂಚದ ಅನೇಕ ಭಾಷೆಗಳಗೆ ಭಾಷಾಂತರಗೊಂಡಿದೆ. ಆ ಗ್ರಂಥವನ್ನು ರಚಿಸಲು ಒಬ್ಬಳು ಗೌಡರಾಜಕುಮಾರಿ ಕಾರಣಳೆಂಬುದು ಬಹು ಮುಖ್ಯವಾದ ಅಂಶ. ಗೌಡರಾಜಕುಮಾರಿಯಾದ ಲೀಲಾವತಿಯು ಆಗ ಉಜ್ಜಯನಿಯನ್ನು ಆಳುತ್ತಿದ್ದ ರಾಜ ಮದನನ ಪತ್ನಿ. ಆಕೆಸುಂದರಿಯೂ ಸಂಸ್ಕೃತದಲ್ಲಿ ಮಹಾಪಂಡಿತಳೂ ಆಗಿದ್ದಳು. ಅಂದರೆ ಈ ಐತಿಹಾಸಿಕ ಘಟನೆಯಿಂದ 2000ವರ್ಷಗಳ ಹಿಂದೆ ಗೌಡರಾಜ್ಯವಿತ್ತೆಂದೂ, ಆ ದೇಶದ ರಾಜಕುಮಾರಿಯು ಗುಣಾಢ್ಯನು ಬೃಹತ್ಕಥೆಯನ್ನು ರಚಿಸಲು ಕಾರಣಕರ್ತಳೆಂದೂ ತಿಳಿದು ಬರುತ್ತದೆ.

ಚಂದ್ರಗುಪ್ತಮೌರ್ಯನ ಕಾಲದಲ್ಲಿ ಗೌಡರಾಜ್ಯವು ಮೌರ್ಯ ಸಾಮ್ರಾಜ್ಯಕ್ಕೆ ಸೇರಿತ್ತು. ಅಶೋಕ ಚಕ್ರವರ್ತಿಯ ಕಾಲದಲ್ಲಿ ಪ್ರಮುಖ ಸ್ಥಾನವನ್ನು ಪಡೆದಿತ್ತು. ಮೌರ್ಯರ ನಂತರ ಗೌಡರಾಜ್ಯ ಗುಪ್ತರ ಆಳ್ವಿಕೆಗೆ ಒಳಪಟ್ಟಿತು.

# ತುಳು ನಾಡಿನ ಗೌಡರು

✍ ಪಿ. ಎಂ. ಆನಂದ ಗೌಡ

ಗೌಡ ಅಂದರೆ ಯಜಮಾನ ಎಂಬ ಅರ್ಥದಲ್ಲಿ ಮುಖ್ಯಸ್ಥನಾಗಿ ಗೌಡ ಜನಾಂಗಲ್ಲಿ ಪ್ರಸಿದ್ಧನಾಗಿದ್ದಾನೆ. ಗೌಡ ಸಮಾಜದ 'ಆಗು-ಹೋಗು'ಗಳಲ್ಲಿ ಗೌಡನ ಪಾತ್ರ ಹಿರಿದಾಗಿದೆ. ಪ್ರಾಚೀನ ಗ್ರಂಥಗಳಲ್ಲಿ ಗಂಗಡಿಕಾರ, ಗಾವುಂಡ, ಗವುಂಡ, ಗೌಡಿ, ಗವೂಂಡರ್ ಗೌಡ ಎಂಬ ಅಭಿಪ್ರಾಯವಿದೆ. ಗೌಡ ದೇಶವಾದ ಬಂಗಾಲದಿಂದ ಇತ್ತ ದಕ್ಷಿಣಕ್ಕೆ ಬಂದವರೆಂಬ 'ಊಹನೆ' ಇದೆ.

**ಶಾಸನಗಳಿಂದ :** ಕಡೂರು ತಾಲೂಕು ಯಗಡಿ ಹೋಬಳಿ ಮರುವಂಜಿ ಗ್ರಾಮದ ಕಲ್ಲೇಶ್ವರ ದೇವಸ್ಥಾನದ ಬಳಿ ನೆಟ್ಟ ಕಲ್ಲು. ಅಸ್ತು ನೆಗಬ್ದಿ ಒಮ್ಮ ಗಾವುಂಡಂ। ಗಂ (ಆತನ ಕುಲವಧು) ವಿಚವೆ ಗಾವುಂಡಿಗಂ ಪುಟ್ಟಿದರು. ಸುಪುತ್ರ ಕುಲದೀಪಕರು... ಸ್ವಸ್ತಿ ಸಮಸ್ತ ಗುಣ । ಸಂಪನ್ನಂ। ನುಡಿದು ಮತ್ತೆನ್ನ ಗೋತ್ರ ಪವಿತ್ರಂ ಪರನಾರೀ ಪುತ್ರ ಕುಲದೇವರ ಶ್ರೀಪಾದ ಪಂಕಜ। ಭ್ರಮರ ನಪ್ಪ ಸೋಮಗಾವುಂಡಂ ನಾಗವೇಗಾವುಂಡಿಗಂ। ಪುಟ್ಟಿದ ಸುಪುತ್ರರಂ ಮಲ್ಲಗೌಡ; ಬಸವಗೌಡ... (ಶಕವರ್ಷ ೧೧೯೨ನೇ ವಿಕ್ರಂಮ ಸಂವತ್ಸರದ...)

ಕಲ್ಯಾಣ ಚಾಲುಕ್ಯರ ಶಾಸನ ಒಂದರಲ್ಲಿ ಎರಡನೇ ಜಗದೇಕಮಲ್ಲನ ಋಷ್ಯ ಶೃಂಗದ (ಶಿರಸಂಗಿಯ, ಸೌಂದತ್ತ ತಾಲೂಕು ಬೆಲಗಾಮ್ ಜಿಲ್ಲೆ) ಕ್ರಿ.ಶ. 1148ರ ಶಾಸನದಲ್ಲಿ ಅಲ್ಲಿನ ಗ್ರಾಮೇಶ್ವರ ದೇವಾಲಯಕ್ಕೆ ಆ ಊರಿನ ಗಾವುಂಡರು (ಗೌಡರು) ಭೂದಾನ ಮಾಡಿದ ದಾಖಲೆಯಿಂದ ಈ ಗಾವುಂಡರು ತೊಳಹ (ತೊಳಪ) ಕುಲಕ್ಕೆ ಸೇರಿದವರೆಂಬ ಉಲ್ಲೇಖವಿದೆ ಈ ತೊಳಹ ಕುಲವು ಉಡುಪಿ ತಾಲೂಕಿನ "ಸುರಾಲಿ" ನಲ್ಲಿ ಆಳಿದುದಕ್ಕೆ ಶಾಸನಗಳಿವೆ. ಈ ತೊಳಹ ಕುಲವು ಬೆಳಗಾಮ್ ತೊಳಹ ಕುಲಕ್ಕೆ ಸಂಬಂಧವೆಂದು ದಿ. ಗುರುರಾಜ್ ಭಟ್ಟರು ಅನುಮಾನಿಸಿದ್ದಾರೆ (Madras, Epigraphical Report for 1931 - 32 Page 63 Para [K.I. Vol - I Int page IX] " ಕಾವಗೌಡಂ ನೆಗರ್ಥ ತೊಳಹರ ಕುಳಕ್ಕೆ ತಿಳಕಂ ಬರಸಿಡಿಲಿದಿರಾನ್ತ ವೈರಿಗಂ ಕೂರ್ಪ ಜನಕ್ಕೆರಗಲಿ ಭಂಡಿ ಎನಿಪ್ಪ ಕಳೆಮರಿ ಇಲ್ಲದೊಳಂಡ ಕಾವಗವುಂಡಂ "ವಿನಯನಿದಿರಾಜಿ ಗೌಡಿಗೆ ಮನುಚರಿತ ನೆನಿಪ್ಪ" ತಿಪ್ಪೆಗೌಡಂ ಗಂ ಕೇತನು ಸಾತನೆಂಬ ಮಕ್ಕಳು ಜನಿಯಿಸಿದರು ತೊಳಪ ಕುಳಕ್ಕೆ ತಿಳಕರೆನಲ್ಕಂ - [K.I. Vol - I No. 24]

ತುಳುವರ ಶಾಸನದಲ್ಲಿ ಈ ತೊಳಹ ಕುಲಕ್ಕೆ ಪ್ರಥಮ ಉಲ್ಲೇಖವು ಭುಜಬಲ ಕವಿಯಾಳ್ವೇಂದ್ರನ ಶಕವರ್ಷ ೧೧೬೨ ಶಾಸನ ಇದರಲ್ಲಿ ಶಿವಾನಂದ ಯೋಗಿನಿ ವೇದ್ಯಶಾಲೆಂ ಮಾಡಿ ಸುರಾಲಲು ತೊಳಹರನ ಕೈಯಲು ಬಿಡಾರ್ಶ್ವರ ಮಾಡಿ ಹಿಡಿ ವಸುಗೆ ಬಿತುವ ಬದಿರಗದ್ದೆಯ ಮೇಲಕ್ಕಿದ ಪಾಂಡ್ಯಗದ್ಯಾಣಂ ಮುವತ್ತು ಮನಾ ಪೊನ್ನ ವೃದ್ಧಿಯುಮಂ ಅಗ್ರಕ್ಕೆಂದು ಶಾಸನ ಮಾಗೆ ಮಾಡಿಸಿದ ಧರ್ಮ (SI I Vol VII No. 381 ಪ್ರೊ. ಗುರುರಾಜ್ ಭಟ್‌ರವರ ತುಳುನಾಡು ಪುಸ್ತಕದಿಂದ) ಇಕ್ಕೇರಿ ನಾಯಕರ ಶಾಸನವು ಸುಳ್ಯ ತಾಲೂಕು ಬಳ್ಪ ಗ್ರಾಮದ ಅರಿಗುಡಿ ಎಂಬಲ್ಲಿಯ ಬಾಕಿ ಮೂರುಗದ್ದೆಯ ಬಳಿ ನೆಟ್ಟಕಲ್ಲು : - ಇದು ಕುಕ್ಕೆ ಸುಬ್ರಹ್ಮಣ್ಯ ದೇವರಿಗೆ ಅಮೃತಪಡಿ ನಂದಾದೀಪಕ್ಕೆ ಬಿಟ್ಟ ದಾಖಲೆ (ಭೂದಾನ ಮಾಡಿದ ವಿವರ) -

ಶುಭಮಸ್ತು ನಮ (ಸ್ತು)ಂಗ ಶಿರಶ್ಚುಂಬ ಚಂದ್ರ ಚಾಮರ
ಚಾರದ ತ್ರಯಲೋಕ್ಯನಗ
ರಾರಂಭ ಮೂಲಸ್ತಂಭಾಯ ಶಂಭವೇ ಸ್ವಸ್ತಿ ಶ್ರೀ
ಶಾಲಿವಾಹನ ಶಕವರುಷ ೧೪೮೪ನೇ ದುಂಧುಬಿ
ಸಂವತ್ಸರದ (ಸೋಮವಾರ 6ನೇ ಏಪ್ರಿಲ್ ೧೫೬೨ ಈಗಿನ ಇಸವಿ ಪ್ರಕಾರ) ಶಾಖಾ ೩ ಸೂಲು ಶ್ರೀ ಮನ್ಮಹಾಮಂಡಲೇಶ್ವರ ಅಳಿಯ ರಾಮಪ್ಪ
ಲಿರತ್ನ ಸಿಂ.
ಹಾಸನರೂಢರಾಗಿ ಸಕಲ ರಾಜ್ಯಂಗಳನ್ನು ಸದರ್ಮದಲ್ಲಿ ಪ್ರತಿಪಾಲಿಸುತಿಹಕಾಲ
ದಲ್ಲು ಯಡನ ಮುರಾರಿ ಕೋಟಿಕೊಳಗಳ ಕೆಳದಿಯ
ಚವುಡಗಉಡರ ಮಕ್ಕಳು (ಸದಾ)
ಶಿವರಾಯನಾಯಕರು ಕುಕ್ಕೆ ಸುಬ್ರಹ್ಮಣ್ಯ ದೇವರ ಅಮೃತಪಡಿ
ದರ್ಮ... ಹೀಗೆ ಮುಂದುವರಿಯುತ್ತದೆ

**ಇನ್ನೊಂದು ಶಾಸನ :** "1485ನೇ ಬಸ್ರೂರು ಶ್ರೀ ಶಂಕರನಾರಾಯಣ ದೇವಾಲಯದ ಪ್ರಾಂಗಣದಲ್ಲಿದ್ದ ಶಾಸನ ಯೆಡಮುರಾರಿ ಕೋಟೆ ಕೊಳಾಹಳ ಪಡುವಣ ಸಮುದ್ರಾದೀಶ್ವರ ಕೆಳದಿ ಚವುಡ ಗೌಡರ ಮಕ್ಕಳು ಕೆಳದಿ ಸದಾಶಿವರಾಯ ನಾಯಕಾರಿಗೆ "ಆಗರಗುತ್ತಿ ಅಯಿವತ್ತಾರು ಗಾವುದ ಮುಂತಾದುವುಗಳನ್ನು ಅವರ ಮಾಗಣೆಯಾಗಿ ಪಾಲಿಸಿದ"

**ಶಾಸನ :** ಸೊರಬ ತಾಲೂಕು ಸಿದ್ದಹಳ್ಳಿ ದೊಡ್ಡ ಕೆರೆ ಏರಿ ಮೇಲೆ ನೆಟ್ಟು ಕಲ್ಲಿನಲ್ಲಿರುವ ಶಿಲಾ ಲೇಖನ (EC Vol, VIII No. Sb - 301) (ಶಾಸನ ತುಂಡು ಕಾಗದದಲ್ಲಿ ಇದೆ)

**ಶೃಂಗೇರಿ ಮಠದ ಗುರುಪೀಠದ ನಿರೂಪ :** ತಾನು ಸ್ವಜಾತಿಯವನು ತನ್ನವರನ್ನು ಉಳಿಸಿಕೊಂಡು ನೀತಿಗೆ ತಪ್ಪದೆ. ಕಳ್ಳತನ, ಹಾದರ, ಕೊಲೆ, ಸುಲಿಗೆ, ಪಾತಕ, ಧರ್ಮದ್ರೋಹ, ಭಾತೃದ್ರೋಹ, ಸಮಾಜ ನಿಂದನೆ ಮಾಡಕೂಡದೆಂದೂ ಬೇಸಾಯ, ಕೃಷಿ ಕಾಯಕ ಮಾಡುವಂತೆ, ಭಿಕ್ಷೆ ಬೇಡದಂತೆ, ಪರನಾರೀ

ಸೋದರರನಾಗಿ ಧರ್ಮವನ್ನು ಕಾಪಾಡಿಕೊಂಡು ಗುರುಪೀಠ ಸ್ಮರಿಸುತ್ತಾ ಇರಬೇಕೆಂದು ನಿರೂಪವಾಗಿದೆ.

**ದ್ವಿತೀಯ ಪುಟದ ಶಾಸನ :**

1) ಸ್ವಸ್ತಿ ಶ್ರೀ ಜಯಾಭುಜ ಶಾಲಿವಾಹನ ಪ|
2) ಕವರು ಸಾವಿರದ ನೆಯ ೧೫೫೦೭ ಪ್ರಮಾದಿ ಸಂ|
3) ವಚರದ ಪುಶ್ಯಸುಧದವಸಿಯು ಮಾಂಗಳವರ
4) ಅರಸಪ್ಪನಾಯಕರ ಕಾಲದಲಿ ಶಂಖಣನಾ
5) ಯಕರಿಗೂ ಅರಸಪ್ಪ ನಾಯಕರಿಗೂ ಜ
6) ಗಳದಲ್ಲಿ ಸೊರಬದ ಪಾರು ಪತೆಗಾರ
7) ವಿರೂಪಾಕ್ಷಯನು ಮಂದಿ ಕೂದೂರ
8) ಹೇಮಾಜಿಯನೆಂಗಳವನು ಮುತ್ತಿಸುವಿರೆ
9) ಯಾಗಿಕೊಂದು ಸಿಧ್ಧಹಳಿಯ ಗ್ರಮನನು
10) ಮುತಳಿ ತೆಂಗಿನ ಕುಮು ಹಳಿಯ ಸ್ತಳವ ಕೊಡದೆ
11) ಮಲ್ಲನಗೌಡರ ಮಗ ಚಿಕಣ ಗೌಡನು ಭಾಗಿಲಿ
12) ಸ್ರ ...... ನೆಟ್ಟು ಕೊಂಡುತಂನ ಗ್ರಮದ
13) ..................................................
14) ವನುತಕೊಂಡು ಜತ್ತಿ ಜಲವ ಬಿಟ್ಟೆ

(ಹಾಗೆ ಮುಂದುವರಿದಿದೆ)

ತುಳುನಾಡಿನ ಇತಿಹಾಸದಲ್ಲಿ ಗೌಡರು ಸೇರಿಕೊಂಡ ಬಗೆಗೆ ಹಲವಾರು ಸಂಶಯಗಳಿಗೆ ಎಡೆಯಾಗುತ್ತದೆ. ವಿಜಯ ನಗರದ ಸಾಮ್ರಾಜ್ಯದ ಸ್ಥಾಪನೆಯಾದ ಮೇಲೆ ಸ್ವತ ಕೃಷಿಕರಾಗಿದ್ದ ಶೈವ ಸಂಪ್ರದಾಯದವರಾದ ಚವುಡಪ್ಪ ಗೌಡ, ಭದ್ರಪ್ಪ ಗೌಡ ಎಂಬ ಸಹೋದರರು ರಾಜಕೀಯದ ಅನಿರೀಕ್ಷಿತ ಬೆಳವಣಿಗೆಯಿಂದ ಕೆಳದಿಯಲ್ಲಿ ಸಣ್ಣ ಸಂಸ್ಥಾನವನ್ನು ಸ್ಥಾಪಿಸಿದರು. ತನ್ನವರನ್ನು ಸೇರಿಸಿಕೊಂಡು ಪುಟ್ಟ ರಾಜ್ಯ ಸ್ಥಾಪನೆ ಹಕ್ಕು ಪಡೆದರು. ಇವರ ತಂದೆ ಬಸಪ್ಪ ತಾಯಿ ಬಸವ್ವೆ. ಕ್ರಿ.ಶ.1480ರಲ್ಲಿ ರಚಿತವಾಗಿ 1485-1515ರ ತನಕ ಚೌಡಪ್ಪ ಗೌಡ ರಾಜನಾಗಿಯೂ ಭದ್ರಪ್ಪ ಗೌಡ ಯುವರಾಜನಾಗಿಯೂ ಆಳಿದರು. ಇವರ ಶೌರ್ಯಪರಾಕ್ರಮಕ್ಕೆ ಮೆಚ್ಚಿದ ವಿಜಯನಗರ ಸಾಮ್ರಾಜ್ಯದ ಅರಸು ಶ್ರೀ ಕೃಷ್ಣದೇವರಾಯರು ತನ್ನ ಅಧೀನರನ್ನಾಗಿ ನೇಮಿಸಿಕೊಂಡರು. ಮತ್ತೆ ಪಟ್ಟಕ್ಕೆ ಬಂದ ಸದಾಶಿವ ನಾಯಕ (1413ರಲ್ಲಿ) ಅರಸರ ಅಪ್ಪಣೆಯಂತೆ ವಿಜಯನಗರ ಸಾಮ್ರಾಜ್ಯದ ಪೂರ್ವ ಸರಹದ್ದಿನ ಮುಸ್ಲಿಮರನ್ನು ಬೇಡರನ್ನು ಯುದ್ಧದಲ್ಲಿ ಸೋಲಿಸಿ ಕಲ್ಯಾಣ ಕೋಟೆ, ಕಲುಬುರ್ಗಿಯನ್ನು ವಿಜಯನಗರದ ಅರಸರಿಗೆ ಒಪ್ಪಿಸಿದ ಪ್ರಯುಕ್ತ ಕೆಳದಿಯ ಅರಸನಿಗೆ ಇಕ್ಕೇರಿ, ಪರ್ಬಯಲು ಎಳಗಳಲೆ, ಮೇದೂರು, ಕಳಸ, ಲಾಟ, ವಾಡಿಗಳೆಂಬ ಸ್ಥಳಗಳನ್ನಿತ್ತು ಸಾಮ್ರಾಟರು ಇವರನ್ನು ನಾಯಕಮಣಿಗಳೆಂಬ ಬಿರುದಿತ್ತು ಸನ್ಮಾನಿಸಿದರು. ಮತ್ತೆ ತುಳುನಾಡಿನ ತುಂಡರಸರ ದಂಗೆಗಳನ್ನೂ ಹತ್ತಿಕ್ಕಿ ಶಾಂತಿ ನೆಲೆಸುವಂತೆ ಮಾಡಿದ ಸದಾಶಿವನಾಯಕನು ಸರಿಯಾಗಿ ಕಂದಾಯ ಸಲ್ಲುವಂತೆ ಮಾಡಿದನು. ಹೀಗೆ ತುಳುನಾಡಿನ ದೇವಾಲಯಗಳನ್ನು ಸಂದರ್ಶಿಸುವಲ್ಲಿ ಸದಾಶಿವ ನಾಯಕನು, ಕೊಲ್ಲೂರು, ಶೃಂಗೇರಿ, ಪೊಳಲಿ, ಕಟೀಲುಗಳಲ್ಲಿ ತಕ್ಕ ಏರ್ಪಾಡುಗಳನ್ನು ಮಾಡಿ ಕುಕ್ಕೆ ಸುಬ್ರಹ್ಮಣ್ಯ ದೇವಾಲಯ ಸಂದರ್ಶನಕ್ಕೆ ಬಂದಾಗ ಇಲ್ಲಿ ಶ್ರೀ ದೇವರ ನಿತ್ಯ ಪೂಜೆಗೆ ತೊಂದರೆಯಿತ್ತು ಸುಬ್ರಹ್ಮಣ್ಯದ ಸರಹದ್ದು ಜನಸಾಂದ್ರತೆ ನಾಶವಾಗಿ ಕಾಡು ಬೆಳೆದಿತ್ತು. ಈ ಸ್ಥಳ ದೇವರ ದೇವಾಲಯ ಜೀರ್ಣೋದ್ಧಾರ ಮಾಡಿ ಪೂಜೆಗೆ ಬ್ರಾಹ್ಮಣರಿಗೆ ವ್ಯವಸ್ಥೆಗೊಳಿಸುವಲ್ಲಿ, ತನ್ನ ಆಪ್ತರನ್ನು ಕರೆಯಿಸಿದನು. ಅಲ್ಲದೇ ಅವರಿಗೆ ಭೂಮಿ ಉಂಬಳಿ ಕೊಡಿಸಿದನು. ಹೀಗೆ ಬಂದವರಲ್ಲಿ ಇಕ್ಕೇರಿ ಕೆಳದಿ, ಐಗೂರು ಎಳಗಳಲೆ, ಮೇದೂರು, ಪರ್ಬಯಲು, ಲಾಟವಾದಿ ಮುಂತಾದ ಕಡೆಯ ಜನರು ಬಂದು ನೆಲೆಯೂದರು. ಅಲ್ಲದೇ ತುಳುನಾಡಿನ ಸ್ಥಿತಿಗತಿಗಳನ್ನು ಅರಿಯುವರೇ ತನ್ನವರನ್ನೂ ಅಧಿಕಾರಿಗಳನ್ನಾಗಿಯೂ, ಸೈನಿಕ ಸ್ಥಾನದಲ್ಲಿ ಇರುವಂತೆಯೂ ಗುತ್ತಿನವರನ್ನಾಗಿಯೂ ಗುಪ್ತಚಾರರನ್ನಾಗಿಯೂ ನೇಮಿಸಿದನು. ಅಲ್ಲದೇ ಬಲ್ಲಾಳ ಬೀಡಿನಲ್ಲಿ ಅಧಿಕಾರಿಗಳನ್ನಾಗಿ ಯೋಗ್ಯರನ್ನು ಬಲ್ಲಾಳರು ಆರಿಸಿಕೊಂಡು ನೆಲೆಗೊಳಿಸಿದರು ಬಂದವರೆಲ್ಲಾ ಮಂಗಳೂರು ನಾಡಲ್ಲಿ ಆಶ್ರಯ ಪಡೆದೊ, ಆಸ್ತಿ ಖರೀದಿಸಿಯೊ ನೆಲೆಗೊಂಡರು. ಬಂದವರೆಲ್ಲ ಶೈವ ಸಂಪ್ರದಾಯದವರಾದ್ದರಿಂದ ಗುರು ಪೀಠವಾಗಿ ಸುಬ್ರಹ್ಮಣ್ಯದಲ್ಲಿ ಶೃಂಗೇರಿ ಮಠದ ಶಾಖೆಯನ್ನು ಮಾಡಿದರು ಎನ್ನಬಹುದು. ಘಟ್ಟದ ಮೇಲಿನವರ ಸಂಪರ್ಕ ಇಲ್ಲಿ ನೆಲೆಸಿರುವ ಕೂಜುಗೋಡು, ಬಿಳಿನೆಲೆ, ಕೊಂಬಾರು, ನಡುತೋಟ ಚಾವಡಿ ಮನೆ, ಬಾಳುಗೋಡು ಏನೆಕಲ್ಲು, ಬಳ್ಪ ಗುತ್ತಿಗಾರು ಅಲ್ಲದೆ ಕಡಬನಾಡು ಎನ್ನುವ ಸ್ಥಳಗಲ್ಲಿರುವವರನ್ನು ಹೊಂದಿರುತ್ತಾರೆ.

ಅರಸರ (ದೇವರ) ಅಪ್ಪಣೆಯಂತೆ ತುಳುನಾಡಿಗೆ ಬಂದ ಗೌಡರುಗಳು ತಮ್ಮ ಹಿಂದಿನ ಸಂಪ್ರದಾಯದಂತೆ ಶೃಂಗೇರಿ ಮಠವನ್ನು ಗುರುಪೀಠವನ್ನಾಗಿ ಅಂಗೀಕರಿಸಿದರು. ಅಂತೆಯೇ ಗುರುಮಠದ ಶಾಖೆಯಲ್ಲಿ ತಮ್ಮ ಗುರು ಕಾಣಿಕೆಯನ್ನು ವ್ಯವಹರಿಸುವರೇ ಮೂಡುಕಟ್ಟೆ ಮನೆ ಕೂಜುಗೋಡು ಮನೆ, ಪಡುಕಟ್ಟೆ ಮನೆ, ಬಲ್ನಾಡು, ಪುತ್ತೂರು ಇವರನ್ನೂ ಆರಿಸಿಕೊಂಡು ಕಟ್ಟೆಗೌಡರು, ಮಾಗಣೆಗೌಡರು, ಊರು ಗೌಡರು ಎಂತ ಜಾತಿ ಪದ್ಧತಿಯನ್ನು ಉಳಿಸಿ ಬೆಳೆಸಿಕೊಳ್ಳುವಲ್ಲಿ ಪ್ರಯತ್ನಶೀಲರಾದರು.

"ಸತಿಯ ಪುತ್ರೊ" ಎಂಬ ವಿಚಾರದಂತೆ ಅಳಿಯ ಕಟ್ಟು ಮಾತ್ರ ಸಂಪ್ರದಾಯವುಳ್ಳ ತುಳುನಾಡಿನಲ್ಲಿ ಹಕ್ಕಿನ ಅಧಿಕಾರವು ಮಹಿಳೆಯರ ವಶವಿದ್ದು ಗೌಡ ಜನಾಂಗದ ಮೇಲೆ ಪ್ರಭಾವ ಬಿತ್ತಿರುವುದನ್ನು ಗಮನಿಸಬೇಕಾಗಿದೆ. ಧಾರ್ಮಿಕ ಸಮಾರಂಭ ದೇವಾಲಯಗಳಲ್ಲಿಯ ಪೂಜಾದಿಗಳ ಬ್ರಾಹ್ಮಣರ ವಶವಿದ್ದು ಅವರಿಗೆ ಅನುಕೂಲರಾಗಿ ಹೊಂದಿಕೊಂಡರು. ಪಟ್ಟದಿಂದ ಬಂದ ಹೆಚ್ಚಿನವರು ಗಂಡಸರಾಗಿದ್ದು ಇಲ್ಲಿಯ ನಾಡವ, ಬಂಟ, ಬಿಲ್ಲವ, ಮೊಗೇರ, ಮುಂತಾದ ಅಳಿಯ ಕಟ್ಟಿನವರೊಡಗೂಡಿ ವರ್ಣ ಸಂಕರವಾಯಿತು

ಎನ್ನುವಲ್ಲಿ ದಿ. ಗುರುರಾಜ ಭಟ್ಟರ "ತುಳುನಾಡಿನ ಇತಿಹಾಸ"ದಲ್ಲಿ ಬೆಳಕು ಚೆಲ್ಲುವುದು. ಗೌಡರು ತುಳುನಾಡಿಗೆ ಬಂದು ನೆಲೆಯೂರುವ ಮುನ್ನ ಇಲ್ಲಿಯ ಅರಸುಮನೆತನದವರಿಂದ ಬಳಿ ಸಂಪ್ರದಾಯ ಕೊಡಲ್ಪಟ್ಟಿತೊ ಅಥವಾ ಅವರ ಕರ್ತವ್ಯದ ಮೇಲೆ ಬಳಿ ಬಂಧಗಳು ಏರ್ಪಟ್ಟವೊ ಎಂಬಲ್ಲಿ ಸ್ಪಷ್ಟ ಆಧಾರಗಳಿಲ್ಲ. ಜೈನ ಸಂಸ್ಕೃತಿಯ ಪ್ರಭಾವವು ಹೆಚ್ಚಿದ್ದು ಹೆಚ್ಚಿನ ತುಂಡರಸರು ಜೈನ ಸಂಪ್ರದಾಯವುಳ್ಳವರಾಗಿದ್ದರು. ಕದಂಬರ ಕಾಲದಲ್ಲಿ ಮೂರು ಹಂತವಾಗಿ ಬಂದ ಬ್ರಾಹ್ಮಣರು ತುಳುನಾಡಿನಲ್ಲಿ ನೆಲೆಯೂರಿ ಇಲ್ಲಿಯ ಹೆಂಗಳೆಯರೊಡನೆ ವಿವಾಹವಾಗಿ ಬಳಿ ಸಮ್ಮಂಧ ಏರ್ಪಟ್ಟವೊ ಎಂಬ ಶಂಕೆಯನ್ನು ಪ್ರೊ। ಗುರುರಾಜ ಭಟ್ಟರು ತನ್ನ ಪುಸ್ತಕದಲ್ಲಿ ಬರೆದಿರುತ್ತಾರೆ. ತುಳುನಾಡಿನಲ್ಲಿ ಗೌಡರುಗಳು ತಮ್ಮ ಮೂಲ ಸಂಸ್ಕೃತಿಯನ್ನು ಅಲ್ಪ ಸ್ವಲ್ಪವಾಗಿ ಉಳಿಸಿಕೊಂಡದ್ದು ಕಂಡು ಬರುತ್ತದೆ. ಪಿತೃ ಪ್ರಧಾನ ಕುಟುಂಬದಲ್ಲಿ ಮನೆ ಯಜಮಾನನೇ ಮುಖ್ಯಸ್ಥನಾಗಿದ್ದು, ತಂದೆ ಆಸ್ತಿಯಲ್ಲಿ ಗಂಡು ಮಕ್ಕಳಿಗೆ ಪಾಲು ಇರುವುದಾಗಿದೆ. ಮಗಳನ್ನು ಕನ್ಯಾಶುಲ್ಕ "ತೆರವು" ಪಡೆದು ಕನ್ಯಾದಾನ ಮಾಡುವುದರಿಂದ 'ಕೊಟ್ಟ ಹುಡುಗಿ ಕುಲದಿಂದ ಹೊರಗೆ' ಎಂಬ ತೀರ್ಮಾನವಿದೆ. ತುಳುನಾಡಿನಲ್ಲಿ ಬ್ರಾಹ್ಮಣ ಪೌರೋಹಿತ್ಯದೊಡನೆ ಗೌಡ ಮಕ್ಕಳಿಗೆ ಮದುವೆಯಾಗುವುದಲ್ಲದೆ ಮಗಳ ತಂದೆಯೇ ಕನ್ಯಾದಾನ ಮಾಡುವುದಾಗಿದೆ. ಸುಳ್ಯ ತಾಲೂಕಿನ ಒಂದೆರಡು ಗ್ರಾಮಗಳಲ್ಲಿ ಗೌಡದಾರ (ದೀಪಸಾಕ್ಷಿ) ಕ್ರಮವು ನಡೆಯುವ ವಾಡಿಕೆಯಿದೆ. ಗೌಡ ಜಾತಿಯ ಅಚಾರ ವಿಧಿಗಳಲ್ಲಿ "ಶಿವ ಬ್ರಾಹ್ಮಣ"ರ ಕ್ರಮ ಸಂಬಂಧಗಳಿವೆ. ಮದುವೆ ಕಾರ್ಯಕ್ರಮಗಳಲ್ಲಿ ವೈಷ್ಣವ ಸಮ್ಮಂಧ ವಿಚಾರಗಳಿದ್ದು, ಶೋಭಾನೆ ಹಾಡುಗಳಲ್ಲಿ ಶ್ರೀಕೃಷ್ಣ ರುಕ್ಮಿಣಿ, ಸತ್ಯಭಾಮೆಯರ ಸಂವಾದ ಬಾಗಿಲು ತಡೆಯುವ ಹಾಡುವಿನಲ್ಲಿ ಸತ್ಯಭಾಮೆಯು ಬಾಗಿಲು ತಡೆದು ಅಣ್ಣನಲ್ಲಿ ತನ್ನ ಮಗನಿಗೆ ನಿನ್ನ ಮಗಳನ್ನು ಮದುವೆ ಮಾಡಿಸಿ ಕೊಡಬೇಕೆಂದು ಬ್ರಾಹ್ಮಣ ಸಾಕ್ಷಿಯಿರಿಸಿ ದಾರಿ ಬಿಡುತ್ತಾಳೆ. ಆದರೆ ಕೊಡಗಿನ ಗೌಡರ ಶೋಭನೆಯಲ್ಲಿ ಶಿವಕಲ್ಯಾಣ ಶೋಭಾನೆಯಿದೆ. ಒಂದಕ್ಕೊಂದು ಸ್ಪಷ್ಟ ವಿಷಯಗಳ ನಿರೂಪಣೆಯಿಲ್ಲವಾದರೂ ನೂತನ ವಧುವರರು ಶ್ರೀ ದೇವರ ಅನುಗ್ರಹದಿಂದ ಅವರು ತೋರಿಸಿದ ದಾರಿಯಲ್ಲಿ ಮುನ್ನಡೆಯಬೇಕೆಂಬ ತಿಳುವಳಿಕೆಯನ್ನು ಅರ್ಥೈಸಬಹುದಾಗಿದೆ ಎನ್ನಬಹುದೇ ಹೊರತು ಜಾತಿ ಪದ್ಧತಿ ಎನ್ನಲು ಅನುಮಾನವಿದೆ.

ತುಳುನಾಡಿನ ಗೌಡರುಗಳ ಕುಟುಂಬ ಸ್ಥಿತಿಯು ಹತ್ತು ಕುಟುಂಬ ಹದಿನೆಂಟು ಗೋತ್ರಗಳಿಂದ (ಬಳಿ) ಬೆಳೆದಿದೆ. ಪ್ರಸ್ತುತ ವಿಚಾರದಲ್ಲಿರುವ ಬಳಿಗಳು (1) ನಂದರೆ ಬಳಿ 2) ಪೆರ್ಬನ ಬಳಿ 3) ಬಂಗೆರೆ ಬಳಿ (ಬಂಗಾರ್ ಬರಿ) 4) ಮೂಲೆರೆ ಬರಿ (ಮೂಲ್ಯರಬರಿ) 5) ಗೌಡೆರೆ ಬರಿ 6) ಚಾಲ್ಯರೆ ಬರಿ 7) ಬಳಸಣ್ಣ ಬರಿ 8) ಗುಂಡಣ್ಣ ಬರಿ (ಸೆಟ್ಟಿ ಬರಿ) 9)ಕಂರ್ಬೆರೆ ಬರಿ 10) ಚಿತ್ತರೆ ಬರಿ 11) ನಾಯೆರ್ ಬರಿ 12) ಸಾಲು ಬರಿ 13) ಕಬರ್ ಬರಿ 14) ಗೋಳಿ ಬರಿ 15) ನಾಗೆರ್ ಬರಿ 16) ಒಣದಣ್ಣ ಬರಿ 17) ಲಿಂಗಾಯಿತ ಬರಿ 18)ಸ್ಥಾನ

ಈ ನಿರ್ಧಾರವನ್ನು ಪುಷ್ಟೀಕರಿಸುವಲ್ಲಿ ದಕ್ಷಿಣ ಕನ್ನಡದ ಮಾನ್ಯೂವೆಲ್ಲಿನಲ್ಲಿ ಬಂಟರ, ಬಿಲ್ಲವರ, ಕುಂಬಾರರ ಹರಿಜನರು ಮುಂತಾದ ಅಳಿಯಕಟ್ಟಿನವರ ಬಳಿ ಸಂಬಂಧಗಳ ಹೆಸರುಗಳು ಈ ಕೆಳಗಿನಂತಿವೆ.

**ತುಳುನಾಡಿನ ಜನರಲ್ಲಿ :** ಭಾಗ್ಯೆತ್ತಿನ್ನಾಯ, ಬಂಗಾರಣ್ಣಾಯ, ಬಿರ್ಮಣ್ಣಾಯ, ಬೋಳಣ್ಣಾಯ, (ಬುನ್ನನ್ನಾಯ) ಹರಿಬಣ್ಣಾಯ (ಸಿರಿಬಣ್ಣಾಯ) ಕರಂಬಣ್ಣಾಯ, ಕರ್ಬುರಣ್ಣಾಯ, ಕೆಲ್ಲರ ಬಣ್ಣಾಯ, ಕೊಲ್ಲರಬಣ್ಣಾಯ, ಕೋಜ ಬಣ್ಣಾಯ, (ಉಜ್ಜಟ್ಟಿನ್ನಾಯ) ಕುಂಡೋಣಿ ಬಣ್ಣಾಯ, ಕುಂಡಲಣ್ಣಾಯ, ನೆಲಬಣ್ಣಾಯ, ಪುಲ್ಯಟ್ಟನ್ನಾಯ, ಸಾಲಣ್ಣಾಯ, ತಲಾರ ಬಣ್ಣಾಯ, (ಐಲವನ್ನಯ) ಪಂಗಲಣ್ಣಾಯ, ಪೆರ್ಗಡೆಣ್ಣಾಯ, ಸಾಲಬನ್ನಾಯ, (ಐಲಬನ್ನಾಯ) ಪುಲ್ಯತ್ತನ್ನಾಯ , ಸಾಲನ್ನಾಯ ತಲಾರಬನ್ನಾಯ, ಉಳಿ ಬಣ್ಣಾಯ, ಉಪ್ಪಣ್ಣಾಯ, ತಿಂಗಳನ್ನಾಯ, ಕಾಂಚನ್ನಾಯ, ಕನ್ನಡಿ ಬನ್ನಾಯ, ಆರ್ಯನ್ನಾಯ ಮುಂತಾದ ವಿಭಾಗಗಳಿವೆ.

ಗೌಡರ ಗೋತ್ರದ ವಿಷಯಕ್ಕೆ ಬರುವಾಗ ನಂದರ ಬಳಿಯ ಕುರಿತು ಹಳಬರು ಹೇಳುವ ಮಾತಿದೆ. ಇವರ ಮಾತೃ ದೇವತೆ ಒಣಗೂರು ಸುಬ್ಬಮ್ಮ ಮತ್ತೆ ಕೆಲವರಿಗೆ ಹೊಸೂರು ಕೆಂಚಮ್ಮ ಎಂಬ ದೇವತಾರಾಧನೆ ಇದೆ. ಇಕ್ಕೇರಿ ಅರಸರ ಅಣತಿಯಂತೆ ಸುಬ್ರಹ್ಮಣ್ಯದ ಬಲ್ಲಾಳರು ಘಟ್ಟದ ಮೇಲಿಂದ ಬಂದವರಿಗೆ ಕೃಷಿ ಭೂಮಿಯನ್ನು ಸುಬ್ರಹ್ಮಣ್ಯದ ಆಸುಪಾಸಿನಲ್ಲಿ ಕೊಡುವಾಗ ಅದರ ಅಧಿಕಾರ ಮುದ್ರೆಯೊಂದಿಗೆ ತನ್ನ ಹೆಸರಿನ ಬಳಿಯನ್ನು ಕೊಟ್ಟರೆನ್ನುವರು. ಸುಬ್ರಹ್ಮಣ್ಯದ ಜೈನ ಬಲ್ಲಾಳರು ನಂದರಾಯ ಎಂಬ ಹೆಸರಿನವರಾಗಿದ್ದು, ಇಲ್ಲಿಯ ಗೌಡರು ನಂದರ ಬಳಿಯವರಾಗಿದ್ದು ಅರೆ ಕನ್ನಡ ಮಾತಾಡುವವರಾಗಿ ಏನೆಕಲ್ಲು ಗ್ರಾಮದ ಕಲ್ಲುದಿ, ಮುತ್ಲಾಜೆ, ಚೋಪಾನ, ಪಾತಾಳ ಎಂಬಲ್ಲಿ ನೆಲೆಯೂರಿ ತಮ್ಮ ಉಳಿದ ಶಾಖೆಗಳನ್ನು ಸುಳ್ಯ ಅಮರಮಾಗಣೆ ಕಡೆ ಕಳುಹಿಸಿ ಕೊಟ್ಟರು. ಇಕ್ಕೇರಿ ಸಂಸ್ಥಾನದ ಅರಸರ ಆಪ್ತರಲ್ಲಿ ಪೆರ್ಬಯಲು ಸೀಮೆಯಿಂದ ತುಳುನಾಡಿಗೆ ಬಂದು ಕಡಬನಾಡು ಮೂಲಕ ಪುತ್ತೂರು ಕಡೆ ಮುಂದುವರಿದರು. ಅವರ ಮುಖ್ಯಸ್ಥರು ಬಳ್ನಾಡು ಕಟ್ಟೆಮನೆ ಪುತ್ತೂರಿನಲ್ಲಿ ನೆಲೆಯಾಗಿರಬೇಕೆಂಬುದಾಗಿ ನಂಬುಗೆಯಿದೆ. ಪೆರ್ಬಯಲು ಪ್ರದೇಶದಿಂದ ಬಂದವರು ಪೆರ್ಬನ್ನರಾದರು. ಮುಂದೆ ಈ ಬಳಿಯಲ್ಲಿ ಮನೆತನದ ಹಿರಿಯರು ಪೆರ್ಬನ್ನಾಗಿ ಕಿರಿಯವ ಗುಂಡಣ್ಣನಾಗಿದ್ದನೆಂದು ಗುಂಡಣ್ಣನು ಅಣ್ಣನಿಗಿಂತ ಬಾಹುಬಲದಲ್ಲಿ ಪರಾಕ್ರಮಿಯೂ, ಮೂತಿನ ಮಲ್ಲನು ಆಗಿದ್ದನೆಂಬ ಪ್ರತೀತಿ ಇದೆ. ಅನಿರೀಕ್ಷಿತ ಘಟನೆಯ ಮೂಲಕ ಪೆರ್ಬನ್ನನ ಮಡದಿಯ ಮೇಲೆ ಗುಂಡಣ್ಣ ಅತಿಕ್ರಮಣ ಮಾಡಿದ ಕಾರಣ ಮನಸ್ತಾಪ ಉಂಟಾಗಿ ರಾಜ ಸ್ಥಾನದಲ್ಲಿ ಗುಂಡಣ್ಣನ ತಪ್ಪು

ಸ್ಥಿರವಾಗದ ಕಾರಣ ಆತ ಉಳಿದುಕೊಂಡುದರಿಂದ "ಪೆರ್ಬಣ್ನ ಬರಿ" ಇಬ್ಭಾಗವಾಗಿ ಗುಂಡಣ್ಣ ಬರಿಯ ಉದಯವಾಯಿತು. ಈತನಿಗೆ ಚಿತ್ತೇರ ಬಳಿಯವರು ಹಾಗೂ ಗೌಡರ ಬಳಿಯವರು ಸಹಾಯಕ್ಕೆ ನಿಂತು ಈ ಘಟನೆಗೆ ಸಂಚು ಹೂಡಿದನೆಂಬ ವ್ಯಕ್ತಿಯನ್ನು (ನಿರಪರಾಧಿಯನ್ನು) ಅಂಗಣದಲ್ಲಿ ನಂಬುಗೆಯಿತ್ತು ಗುಂಡದಲ್ಲಿ ತಲೆ ಕಡಿದರೆಂಬ ಅಪವಾದವಿದೆ. ಈ ಪ್ರಕರಣದಲ್ಲಿ ಗುಂಡನ ತಲೆ ಕಡಿಸಿದ್ದೋ - ತಲೆಕಡಿದ್ದದೋ ಎಂಬ ಸಂದೇಹವಿದ್ದು ಇಡೀ ಪ್ರಕರಣವನ್ನು ನಂಬಲಸಾಧ್ಯವಾಗಿದೆ. ಆದರೆ ಪರ್ಗಡೆಯ ಬಳಿಯುವರ ಸಂಪರ್ಕದಿಂದಾಗಿ "ಪೆರ್ಬಣ್ಣ ಬರಿ" ಉದಯವಾಯಿತೋ ಏನೋ? ಗುಂಡಣ್ಣ ಬಳಿ ವಿಭಾಗವಾಗಿ ಮುಂದೆ ಪೆರ್ಬಣ್ಣ ಬಳಿಯಿಂದ ದೂರವಾಯಿತು. ಆದರೂ ಗುಂಡಣ್ಣ ಬಳಿಯುವರು ಶೌರ್ಯವಂತರೆಂಬ ಹೆಸರು ಖ್ಯಾತಿಯಲ್ಲಿದೆ.

**ಮೂಲರ ಬಳಿಯವರು :** ತಾವು ಅತೀ ಹಿಂದಿನವರೆನ್ನುತ್ತಾರೆ. ತುಳುನಾಡಿನಲ್ಲಿ ಮೂಲ ಬಳಿಯ ಅಳಿಯ ಕಟ್ಟಿನವರು ಇರುವುದರಿಂದ ಈ ಬಳಿಯು ಅದೇ ರೀತಿಯ ಹೊಂದಿಣಿಕೆಯಿರಬೇಕೆಂಬ ಸಂಶಯವಿದೆ. ಮೂಲರ ಬಳಿಯವರಲ್ಲಿ ಅಣ್ಣನ ಹೆಂಡತಿ ವಿಧವೆಯಾದಲ್ಲಿ ತಮ್ಮ ಮದುವೆಯಾಗುವ ಸಂಪ್ರದಾಯ ಕಂಡುಬರುವುದರಿಂದ ಇವರಿಗೂ ಗುಂಡಣ್ಣ ಬಳಿಯವರಿಗೂ ತುಂಬಾ ಹೊಂದಾಣಿಕೆಯಾಗುತ್ತದೆ. ಉಳಿದೆಲ್ಲಾ ಬಳಿಗಳಿಂದಲೂ ಗುಂಡಣ್ಣ ಬಳಿ ಮತ್ತು ಮೂಲರ ಬಳಿಗಳಲ್ಲಿ ಹೆಚ್ಚು ಸಮ್ಮಂಧ ನಡೆದಿದೆ.

ಬಂಗರಸರ ಆಡಳಿತವುಳ್ಳ ಸ್ಥಳಗಳಲ್ಲಿ ಗೌಡರು ತಮ್ಮ ನೆಲೆಯಲ್ಲಿ ಕಂಡುದುದರಿಂದಲೂ ಬಂಗೇರ ಬಳಿಯ ತುಳುವರ ಸಂಪರ್ಕದಿಂದಲೂ ಅಥವಾ "ಕುಕ್ಕೇತಿ ಬಿಲ್ಲು" ಮಾತೃಕಾರಕ ದೈವದ ಉಪಾಸನೆಯಿಂದಲೊ ಎಂಬಂತೆ ಬಂಗೇರ ಬಳಿಯನ್ನು ತುಳುನಾಡಿನಲ್ಲಿ ಗೌಡರು ಅನುಸರಿಸುತ್ತಿದ್ದಾರೆ. ತುಳುವಿನಲ್ಲಿ ಬಂಗೇರ ಬಳಿಯ ಹುಡುಗಿಯರಿಗೂ ಲಾವದಮರ (ಕಾವಟೆ ಮರ)ಕ್ಕೂ ತಮಾಷೆ ಮಾತು ಕಲ್ಪಿಸುತ್ತಾರೆ. "ನಾಯೆರ್ ಬರಿ"ಯನ್ನು ಅವಲೋಕಿಸುವಾಗ ನೇಗಿಲು ಎಂಬ ವಿಚಾರ ಬರುತ್ತದೆ. ಈ ಚಿಹ್ನೆಯ ಆಧಾರದಲ್ಲಿ ಬಳಿಯನ್ನು ಹೇಳಲಾಗದು. ಗೌಡರು ಬೇಸಾಯಗಾರರಾಗಿದ್ದ ಕಾರಣ ಎಲ್ಲರಿಗೂ ನೇಗಿಲು ಉಳುಮೆಗಾಗಿ ಬೇಕಿತ್ತು. ಅದನ್ನು ಬೇಸಾಯದವರೇ ಮಾಡುತ್ತಿದ್ದರು. ಆದರೆ ಎಲ್ಲರಿಗೂ ನೇಗಿಲು ಮಾಡಲಾಗುತ್ತಿರಲಿಲ್ಲ. ಗೌಡನು ಭಿಕ್ಷೆ ಬೇಡಬಾರದು– ಅನಿವಾರ್ಯ ಸ್ಥಿತಿಯಲ್ಲಿ ಗೌಡನು "ನೊಗ ನೇಗಿಲ" ಚಿಹ್ನೆ ಧರಿಸಿ ಬೇಡುವುದಕ್ಕೆ ಅವಕಾಶವಿದೆ ಎಂತ ನಂಬಿಗೆ. ಉಳಿದ ಬಳಿಗಳಲ್ಲಾ ಸಣ್ಣ ಸಣ್ಣ ಕುಟುಂಬದವರಾಗಿರುತ್ತಾರೆ. ಇತ್ತೀಚೆಗೆ "ವಾಗರ್ ಬರಿ" ಒಂದೇ ಕುಟುಂಬವು ಗುತ್ತಿಗಾರು ಕಡೆ ಇದೆ.

**ಲಿಂಗಾಯುತರ ಬಳಿ :** ಈ ಬಳಿಯನ್ನು ತುಳುನಾಡಿನಿಂದ ಘಟ್ಟದ ಕಡೆ ಸಮ್ಮಂಧ ಮಾಡುವುದಿದ್ದಲ್ಲಿ ಘಟ್ಟದ ಆ ಕಡೆಯಿಂದ ತುಳುನಾಡಿಗೆ ಹೆಣ್ಣು ತರುವುದಿದ್ದಲ್ಲಿ ಘಟ್ಟದ ಕಡೆಯವರಿಗೆ ತುಳುನಾಡಿನ ವಾಡಿಕೆಯಂತೆ ಬಳಿ ಸಮ್ಮಂಧ ಕಲ್ಪಿಸುವುದಿದೆ. ಘಟ್ಟದ ಕಡೆಯವರಿಗೆ ತಮ್ಮ ಸಮ್ಮಂಧದಲ್ಲಿ ಅತ್ತಿಗೆ-ನಾದಿನಿ, ಬಾವ-ಮೈದುನ, ಅತ್ತೆ-ಮಾವ ಎಂಬ ಸಮ್ಮಂಧವನ್ನು ರೂಢಿಯಲ್ಲಿ ಕರೆಯಲಾರರು. ಅಲ್ಲಿಯ ಜನಾಂಗ ಆಚರಿಸಿದ ಅಕ್ಕನ ಮಗಳನ್ನು ತಮ್ಮ ಮದುವೆಯಾಗುವುದು ವಶಿಷ್ಠಾಚಾರವಿದೆ. ಅಂತೆಯೇ ಈ ಆಚರಣೆಯನ್ನು ನಡೆಸುವ ಸಂಪ್ರದಾಯವಿರಿಸಿಕೊಂಡವರು.

ಹೀಗೆ ಬಳಿಗಳು ಹದಿನೆಂಟು ಎಂತ ನಾವು ಕರೆಯುತ್ತಿರೊ ಸ್ಪಷ್ಟ ಮಾಹಿತಿಗಳು ನಮಗೆ ದೊರೆಯುವುದಿಲ್ಲ. ಹತ್ತು ಕುಟುಂಬದಲ್ಲಿ ಹದಿನೆಂಟು ಗೋತ್ರ ಹೇಗಾಯಿತೆಂದು ತಿಳಿಯಲಾಗದು. ತುಳುನಾಡಿನಲ್ಲಿ ಗೌಡರುಗಳು ದೊಡ್ಡ ದೊಡ್ಡ ಮನೆಗಳನ್ನು ಕಟ್ಟಿಕೊಂಡು ಮನೆ ಯಜಮಾನನ ಅಣತಿಯಂತೆ ಹಲವಾರು ತೊಟ್ಟಿಲು ಕಟ್ಟಿಕೊಂಡು ಅವಿಭಕ್ತ ಕುಟುಂಬಿಕರಾಗಿ ವಾಸಿಸುತ್ತಿದ್ದರು. ಧಾರ್ಮಿಕ ಆಚರಣೆ ನಡೆಯುತ್ತಿತ್ತು. ತುಳುನಾಡಿನ ಧಾರ್ಮಿಕ ಆಚರಣೆಗಳನ್ನು ಬ್ರಾಹ್ಮಣರ ಮುಖೇನ ತುಳುವ ಸಂಸ್ಕೃತಿ ಆಚರಿಸಹತ್ತಿದರು. ಕೃಷಿ, ಸಂಪತ್ತು ಸಂತಾನಕ್ಕಾಗಿ ನಾಗಾರಾಧನೆಯನ್ನು ಭೂಮಿ ಸಮ್ಮಂಧದಲ್ಲಿ ಆಚರಿಸಿದರು. ತುಳುನಾಡಿನ ಕಲ್ಲುರ್ಟಿ ದೈವವು ಮಾತೃ ಪ್ರಧಾನವಾಗಿದ್ದು ಗೌಡರು ತಮ್ಮ ಮನೆಗಳಲ್ಲಿ ಅನ್ಯರು ಆಚರಿಸುವಂತೆ ಆಚರಿಸಿದರು. ತಮ್ಮ ಮಾತೃ ಸ್ಥಾನದಿಂದ ದೈವ ಶಕ್ತಿ ಬಂದುದಾಗಿ ಕೆಲವರು ಅತ್ತೆ ಮನೆಯ ದೈವ, ಅಜ್ಜಿ ಮನೆಯ ದೈವ ಎಂದು ಎರಡೆರಡು ಪ್ರತಿಮೆಗಳನ್ನು ಮಾಡಿಸಿ ತಂಬಿಲಾದಿಗಳನ್ನು ಮಾಡುವುದಿದೆ. ಈಗ ಭೂಮಿ ಸಂಬಂಧದಿಂದಲೂ ಊರಿನ ಗುತ್ತು, ಅಧಿಕಾರ, ಸ್ಥಾನಗಳ ಒಡೆತನದಿಂದ ಗೌಡರುಗಳು ಊರಿನ ನಂಬಿಕೆಯ ದೈವ ದೇವರ ಆರಾಧನಾ ಕಾರ್ಯಗಳನ್ನು ಪೆರ್ಗಡೆಗಳಾಗಿಯೂ ಮನೆತನದವರಾಗಿಯೂ ನಡೆದುಕೊಳ್ಳುತ್ತಿದ್ದಾರೆ.

ಅರಸರೊಳಗಿನ ವೈಷಮ್ಯ ವಿರೋಧ, ಸಂಗ್ರಾಮಗಳ ಪರಿಣಾಮ ಗೌಡರ ಮೇಲೆಯೂ ಪರಿಣಾಮ ತಟ್ಟಿರುವುದರಿಂದ ಹೆಚ್ಚಿನ ಮನೆತನಗಳಲ್ಲಿ ಹಳೆಯ ಪೆಟ್ಟಿನ, ಕತ್ತಿ ಗುರಾಣಿಗಳೂ ಇರಬಹುದು. ಕಾರಣ ಹಿಂದೆ ಮನೆಯ ಮುಂಬಾಗಿಲಲ್ಲಿ ಪೆಟ್ಟಿನ ಕತ್ತಿ ಮತ್ತು ಅಂದು ತಯಾರಿಸಿದ ಊಟದ ಬುತ್ತಿ ಇಡುತ್ತಿದ್ದರು. "ರಣಕೊಂಬು" ಬೋರ್ಗರೆದ ಕೂಡಲೇ ಮನೆಯಿಂದ ಒಬ್ಬ ಯೋಧನಾಗಿ ರಣಕ್ಕೆ ಹೋಗುವ ರೂಢಿಯಿತ್ತು. ಈ ಬಳಿ ಬಂಧಗಳೆಲ್ಲಾ ತುಳುನಾಡಿನ ಜನರ ಸಂಪ್ರದಾಯಕ್ಕೆ ಅನುಸಾರವಾಗಿ ಗೌಡರುಗಳು ಅನುಸರಿಸಿದ್ದಾರೆ. ಎಂದು ನಂಬಬಹುದು. ಅಲ್ಲದೆ ಸ್ಥಳನಾಮ, ವ್ಯಕ್ತಿಯ ಹೆಸರು, ಮರದ ಹೆಸರು ಮನೆತನದ ಹೆಸರುಗಳಿಂದಲೂ ಬಳಿಯು ಹುಟ್ಟಿರಬಹುದು. ಮದುವೆ ಕಾರ್ಯಕ್ರಮಗಳಲ್ಲಿ ಬಳಿಯ ಹೆಸರೆತ್ತಿ ಸಂಬಂಧ ಕಲ್ಪಿಸುತ್ತಾರೆ.

ಹೆಣ್ಣು ಕೊಡುವ ತಂದೆ ಗಂಡಿನವರಿಂದ ಕನ್ಯಾ ಶುಲ್ಕ (ತೆರವಿನ ಹಣ) ಪಡೆದು ತನ್ನ ಬಟ್ಟೆಯ ಸೆರಗಿನಲ್ಲಿ ಕಟ್ಟಿಕೊಂಡು ತಲೆಗೆ ರುಮಾಲು ಸುತ್ತಿ ಬ್ರಾಹ್ಮಣ ಪೌರೋಹಿತ್ಯದಿಂದ "ಪವಿತ್ರ ಕಳಸ" ಕೊಂಜಿನ ಗಿಂಡಿ ಅದಕ್ಕೆ ತಗುಲಿಸಿದ ಹೊಸ "ಮಾಂಗಲ್ಯ ಸೂತ್ರ"ವನ್ನು ಜಾತಿ ಸಮಸ್ತರೊಡನೆ ಕೈಮುಟ್ಟಿ ಆಶೀರ್ವಾದ ಪಡೆದು ಪುನಃ ಪುರೋಹಿತರ ಕೈಗೆ ಕೊಟ್ಟು, ಅವರಿಂದ ಮಾಂಗಲ್ಯ ಸೂತ್ರ ತೆಗೆಸಿ ಗಂಡು ಹೆಣ್ಣಿಗೆ ಮಾಂಗಲ್ಯ ಸೂತ್ರ ಕಟ್ಟಿದ ಮೇಲೆ ಗಂಡಿನಕ ಕಡೆಯವರು ಧಾರೆ ಬಟ್ಟಲು ಹಿಡಿದಾಗ ಹೆಣ್ಣಿನ ತಂದೆ "ಕಳಸದ ಪವಿತ್ರ ಉದಕ" (ಕೊಂಜಿನ ಗಿಂಡಿಯ ನೀರು)ವನ್ನು ಪುರೋಹಿತರ ಮಂತ್ರೋಚ್ಚಾರಣೆ ಹಾಗೂ ಅಕ್ಷತೆಗಳೊಂದಿಗೆ ಗಿಂಡಿಯ ಕೊಂಬಿನ ಉದಕವು ತನ್ನ ಹೃದಯ ಸ್ಥಾನಕ್ಕೆ ಎದುರು ಒಳಮುಖವಾಗಿ ಐದು ಸಲ ಕೈ ಬದಲಾಯಿಸಲು ಗಂಡು ಹೆಣ್ಣಿಗೆ ತಿಳಿಸುತ್ತಾ ಐದು ಸಲ ಧಾರಪೂರ್ವಕ ನೀರೆರೆಯುವ ಕ್ರಮವು ತುಳುನಾಡ ಸಂಸ್ಕೃತಿಯಾಗಿದೆ. ಕೆಲವು ಕಡೆ ದರ್ಪಣದಲ್ಲಿ ಪ್ರತಿಬಿಂಬ ತೋರಿಸುವ ವಾಡಿಕೆ ಇದೆ. ಮತ್ತೆ ಆ ಹೆಣ್ಣು ತಂದೆಯ ಕುಲದಿಂದ ಹೊರತಾಗಿ ಗಂಡನ ಕುಲವನ್ನು ಸೇರುವಳು. ಆದರೆ ತುಳುವರಲ್ಲಿ ಮೂಲತಃ ತಾಯಿಯ ಬಳಿಯೇ ಮಗಳಿಗೂ ಮಗನಿಗೂ ಅನ್ವಯಿಸುತ್ತದೆ.

ಕುಲದೇವರ ಆರಾಧನೆಯನ್ನು ಮುಂದೆ ಬ್ರಾಹ್ಮಣರ ಮೂಲಕ ನಡೆಸುತ್ತಿದ್ದರು. ಕೆಲವರು ಕಾಪಾಲಿಕ ಸ್ಥಿತಿಯಲ್ಲಿ (ಕೆಂಚಿರಾಯ ಅರ್ಥಾತ್ ಅಸುರ ಪ್ರವೃತ್ತಿ) ಪೂಜೆಯನ್ನು ಕೈಗೊಂಡರು. 1932ರಲ್ಲಿ ಬ್ರಾಹ್ಮಣ ವರ್ಗದವರಿಂದ ತಕರಾರು ನಡೆದು ಗೊಂದಲ ಉಂಟಾದಾಗ ಶೃಂಗೇರಿ ಗುರುಪೀಠದ ಆಣತಿಯಂತೆ "ದಾಸ" ಜನಾಂಗದವರಿಂದ ಕುಲದೇವರ ಆರಾಧನೆ ನಡೆಯ ಹತ್ತಿತ್ತು. ಇದು ಕೂಡ ತುಳುನಾಡಿನ ಸಂಪ್ರದಾಯವಾಗಿದ್ದು ಗೌಡರು ಅಂಗೀಕರಿಸದ್ದಾಗಿದೆ.

ಗೌಡ ಜಾತಿಯಲ್ಲಿ ಮೃತನಿಗೆ ಸಂಸ್ಕಾರ ಕಾರ್ಯಗಳು ತುಳುನಾಡಿನ ಸಂಸ್ಕೃತಿಯಲ್ಲೇ ನಡೆಯುತ್ತಿದೆ. ಸಂಸ್ಕಾರ ಕಾರ್ಯಕ್ಕೆ ಮಡಿವಾಳ, ಕ್ಷೌರಿಕ ಮೊದಲಾದವರು ಸಹಕರಿಸುತ್ತಾರೆ. ಅಲ್ಲದೆ ಪ್ರೇತ ಕರ್ಮಗಳಲ್ಲಿ ಸಹಭಾಗಿಗಳಾಗಿ ಪ್ರೇತ ದೂಟಗಳನ್ನು ಪಡೆಯುತ್ತಾರೆ. ಇವರ ವಿನಹ ಶವ ಸಂಸ್ಕಾರದ ಉತ್ತರ ಕ್ರಿಯೆಗಳು ನಡೆಯಲಾರವು.

ಹಾಗೆ ಘಟ್ಟದ ಮೇಲಿನಿಂದ ಬಂದ ಗೌಡರುಗಳು ತುಳು ನಾಡಿನ ಸಂಸ್ಕತಿಯೊಂದಿಗೆ ಮೇಳೈಸಿ ತಮ್ಮದೇ ಆದ ಪರಂಪರೆಯನ್ನು ರಚಿಸಿಕೊಂಡಿದ್ದು ಈಗೀನ ವೈಜ್ಞಾನಿಕ ಯುಗದಲ್ಲಿ ಸಂಪ್ರದಾಯವನ್ನು ಕಳಚುತ್ತಿದ್ದಾರೆ ಎಂಬುದು ವಿಷಾದನೀಯ ಸಂಗತಿ.

ಗ್ರಂಥ ಋಣ:-

1) ವಿಚಾರ ಕರ್ನಾಟಕ:- ಲೇ.ತಿ.ತಾ.ಶರ್ಮ
2) ಕೆಳದಿಯ ಐತಿಹಾಸಿಕ ನಿಬಂಧಗಳು
   ಸಂಪಾದಕರು ಡಾ| ಜಿ.ಯಸ್.ದೀಕ್ಷಿತ್
3) ತುಳುನಾಡು ತೌಳವ ಸಂಸ್ಕೃತಿ
   ದಿ| ಪಿ. ಗುರುರಾಜ್ ಭಟ್
4) ಉತ್ತರ ಕನ್ನಡ ದರ್ಶನ
   ಸಂಪಾದಕರು ಟಿ.ಕೆ. ಮಹಮೂದ್
5) ಕರಾವಳಿ ಕರ್ನಾಟಕ ರಾಜಕೀಯ ಇತಿಹಾಸ - ಸಂಶೋಧನೆ
   ಡಾ| ಕೆ.ಜಿ.ವಸಂತ ಮಾಧವ
6) ತುಳುನಾಡಿನ ಇತಿಹಾಸ
   ಡಾ| ಕೆ.ವಿ.ರಮೇಶ್.
7) ಹಿರಿಯರ ಮೌಖಿಕ ವಿಷಯ
   ಕ್ಷೇತ್ರ ಅಧ್ಯಯನ ಇತ್ಯಾದಿ.,

## ಗೌಡರು ಆಳಿದ ರಾಜ್ಯಗಳು

ಗೌಡರು ಆಳಿದ ರಾಜ್ಯಗಳನ್ನು ಈ ಕೆಳಕಂಡಂತೆ ಪಟ್ಟಿಮಾಡಬಹುದು.

ಪಾಂಡ್ಯ, ದ್ರಾವಿಡ, ಕೋಲಮಂಗಲಂ, ಆಂಧ್ರ, ಅಮರಾವತಿ, ವಿದರ್ಭ, ಕುಂದಿನಾಪುರ, ಕಳಿಂಗ, ಉತ್ಕಲ, ಅಂಗ, ಪಾಟಲಿಪುತ್ರ, ಮಹಾರಾಷ್ಟ್ರ,ಕೊಂಕಣಿ, ಗುಜರಾತ್, ಕೊಟ್ಟ, ಮಾಳ್ವ, ಆವಂತಿ, ಸಿಂಧೂ, ಪಾಂಚಾಲಿ, ಕೋಶಲ, ಕಾಶಿ(ವಾರಂಗಲ್), ಪಂಜಾಬ್, ಬಾಲ್ಕ್, ಸ್ತ್ರೀರಾಜ್ಯ, ಸ್ತ್ರೀ ರಾಷ್ಟ್ರ ಮುಂತಾದವು

## ಗೌಡ ಪ್ರಭುಗಳು ಆಳಿದ ರಾಜ್ಯಗಳು

ಗೌಡರು ಆಳಿದ ರಾಜ್ಯಗಳನ್ನು ಈ ಕೆಳಕಂಡಂತೆ ಪಟ್ಟಿಮಾಡಬಹುದು.

ಪಾಂಡ್ಯ, ವೇನಾಡ್, ಮಧುರಾ, ಗಂಗವಾಡಿ, ನೊಳಂಬವಾಡಿ,ಕಾಂಚಿ, ಬನವಾಸಿ, ಕದಂಬ, ನೆಲ್ಲೂರು, ವೆಂಗಿ, ಕಲ್ಯಾಣಿ, ಮುಂತಾದ ಹಲವಾರು ರಾಜ್ಯಗಳನ್ನು ಗೌಡ ಪ್ರಭುಗಳು ಆಳಿರುವುದು ಇತಿಹಾಸದಿಂದ ತಿಳಿದು ಬರುತ್ತದೆ.

"ಅರಮನೆ ಗುರುಮಠ ಹತ್ತು ಕುಟುಂಬ ಹದಿನೆಂಟು ಗೋತ್ರ ಬಂಧು ಬಾಂಧವರೊಡಗೂಡಿ ನೆಂಟರಿಷ್ಟರೊಂದಿಗೆ ಕೇಳಿ..."

# ವೀಳ್ಯ ಶಾಸ್ತ್ರ

ಡಾ. ವಿಶ್ವನಾಥ ಬದಿಕಾನ

ಗೌಡರ ಸಾಂಪ್ರದಾಯಿಕ ಮದುವೆಯಲ್ಲಿ ವೀಳ್ಯ ಶಾಸ್ತ್ರಕ್ಕೆ ಹೆಚ್ಚು ಪ್ರಾಮುಖ್ಯತೆಯಿದೆ. ಮದುವೆ ತಪ್ಪಬಾರದೆಂದು 'Engagement ಎಂದರೆ 'ದಿನ ಗೊತ್ತು ಮಾಡುವುದು' ಈ ಶಾಸ್ತ್ರದ ಉದ್ದೇಶ. ಒಮ್ಮೆ 'ನಿಘಂಟು' (Engage) ಆದ ಮೇಲೆ ಮದುವೆಯ 'ಕೆಲಸಕ್ಕೆ ಹಚ್ಚಿಕೊಳ್ಳಲು' ಗಂಡು ಮತ್ತು ಹೆಣ್ಣಿನ ಕಡೆಯವರಿಗೆ ವೀಳ್ಯ ಶಾಸ್ತ್ರ ನಿರ್ದೇಶನ ನೀಡುತ್ತದೆ. ರೆ| ಫಾ| ರಿಘ್ಗರ್ ಶಬ್ದಕೋಶದ ಪ್ರಕಾರ Engage. ಎಂದರೆ... ಕೂಡಾ ಲಡಾಯಿ ಮಾಡು. ಮಾತು ಕೊಡು, ಮನಸ್ಸು ಎಳಕೊಳ್ಳು, ಕರಾರು ಮಾಡು. 'Engagement' ಎಂದರೆ ನಿಶ್ಚಿತಾರ್ಥ, ವಾಗ್ನಿಶ್ಚಯ ಮೊದಲಾದ ಅರ್ಥಗಳಿವೆ. (English-Kannada Dictionary-1888). ವೀಳ್ಯ ಶಾಸ್ತ್ರ ಎಂದರೆ ವೀಳ್ಯದ ಎಲೆಯನ್ನು ಹರಿವಾಣದಲ್ಲಿ ಕವಳೆ ಕವಳೆಯಾಗಿ ಕಟ್ಟುವುದು. ಗೌಡರು ಮದುವೆಯಲ್ಲಿ ಯಾವ ಸಂದರ್ಭದಲ್ಲಿ ಯಾವ ವೀಳ್ಯವನ್ನು ಕಟ್ಟುತ್ತಾರೆ ಎಂಬುದನ್ನು ವಿವರಿಸುವುದು ಈ ಬರಹದ ಉದ್ದೇಶ.

## ವೀಳ್ಯಶಾಸ್ತ್ರದ ವಿಧಗಳು

1. ಸ್ವಾಗತ ವೀಳ್ಯ : ಹೆಣ್ಣಿನ ಕಡೆಯ ಗೌಡರು ಗಂಡಿನ ಕಡೆಯ ಗೌಡರಿಗೆ 5 ಕವಳೆ ವೀಳ್ಯ ಮತ್ತು 5 ಅಡಿಕೆಯನ್ನು ಹರಿವಾಣದಲ್ಲಿಟ್ಟು ಪರಿಚಯ ಮಾಡಿಕೊಳ್ಳುತ್ತಾರೆ.
2. ನೆಂಟರ ವೀಳ್ಯ: ಗಂಡಿನ ಕಡೆಯಿಂದ ಹೆಣ್ಣಿನ ಕಡೆಯವರನ್ನು 5 ಕವಳೆ ವೀಳ್ಯ ಮತ್ತು 5 ಅಡಿಕೆಯನ್ನು ಹರಿವಾಣದಲ್ಲಿಟ್ಟು ಪರಿಚಯ ಮಾಡಿಕೊಳ್ಳುವುದು. ಈ ಎರಡೂ ಸಂದರ್ಭದಲ್ಲೂ ಗಂಡಿನ ಕಡೆಯವರು ಮತ್ತು ಹೆಣ್ಣಿನ ಕಡೆಯವರು ತಮ್ಮ ತಮ್ಮ 'ಬಳಿ'ಯನ್ನು "ಅರಮನೆ ಗುರುಮಠ...." ಕ್ರಮದಲ್ಲಿ ಕರೆದು ಹೇಳುವರು.
3. ಚೌಕದ ವೀಳ್ಯ: ಚೌಕಾಕಾರದಲ್ಲಿ ಕುಳಿತು ಗಂಡಿನ ಕಡೆಯವರು ಹೆಣ್ಣಿನ ಕಡೆಯವರಿಂದ 'ಅನುಮತಿ' ಕೇಳುವುದು ಎಂದರೆ ಹೆಣ್ಣನ್ನು ಗಂಡಿನ ಕಡೆಯವರು ಅಂತಿಮ ಒಪ್ಪಿಗೆ ನೀಡುವುದು. ಚೌಕದಲ್ಲಿ ಕುಳಿತು ಗಂಡಿನ ಕಡೆಯವರು - ಹೆಣ್ಣಿನ ಕಡೆಯವರು ವೀಳ್ಯ ಕಟ್ಟುವುದು ಪದ್ಧತಿ. 5 ಕವಳೆ ವೀಳ್ಯದೆಲೆ ಮತ್ತು 5 ಅಡಿಕೆ ಹರಿವಾಣದಲ್ಲಿಟ್ಟು ಬದಲಿಸಿಕೊಳ್ಳುತ್ತಾರೆ.
4. ಲಗ್ನ ವೀಳ್ಯ : 5 ಕವಳಿಗೆ ಎಲೆ 5 ಅಡಿಕೆಯನ್ನು ಹರಿವಾಣದಲ್ಲಿ ಕಡೆ-ಕೊಡಿ ಇಟ್ಟು ಗಂಡು-ಹೆಣ್ಣಿನ ಕಡೆಯವರು ಹಂಚಿಕೊಳ್ಳುವರು. ಇದರಲ್ಲಿ 5 ಎಲೆ ಒಂದು ಅಡಿಕೆಯನ್ನು ಎರಡೂ ಕಡೆಯವರು ತೆಗೆದು ಹೆಣ್ಣಿಗೆ ಮತ್ತು ಗಂಡಿಗೆ ಪೂರ್ತಿ ತಿನ್ನಲು ನಿರ್ದೇಶಿಸುವರು. ಇಲ್ಲಿಂದ ಗಂಡು-ಹೆಣ್ಣಿಗೆ ವೀಳ್ಯ ಹಾಕಲು ಹಿರಿಯರು ಅನುಮತಿ ನೀಡುವರು.
5. ನೆಂಟರಿಷ್ಟರು ವೀಳ್ಯ : ಬಂಧು ಬಾಂಧವರ ಗೌರವಾರ್ಥ ವೀಳ್ಯ ಕಟ್ಟಿ ಮದುವೆ ಕಾಗದವನ್ನು ಎರಡೂ ಕಡೆಯವರು ಜೋರಾಗಿ ಓದುವರು.
6. ದೇವರ ವೀಳ್ಯ: ದೇವರಿಗೆ ಗೌರವಿಸುವ ವೀಳ್ಯ. ಈ ವೀಳ್ಯವನ್ನು ವೀಳ್ಯ ಶಾಸ್ತ್ರದ ದಿನ ಕಟ್ಟುವುದಿಲ್ಲ. ಮದುವೆಯ ದಿನ ಮಂಟಪದಲ್ಲಿ ಕಟ್ಟುವುದು ರೂಢಿ. ಆದರೆ ಈ ವೀಳ್ಯ ಕಟ್ಟುವುದಕ್ಕೆ ಎರಡು ವಿಶೇಷ ಸಂದರ್ಭಗಳಿವೆ. 1. ಬಂಟಧಾರೆ ಮಾಡುವುದಾದರೆ ವೀಳ್ಯ ಶಾಸ್ತ್ರದಂದೇ ಮನೆಯಲ್ಲಿ ದೇವರ ವೀಳ್ಯ ಕಟ್ಟುವುದಿದೆ. ತುಳು ನಿಘಂಟಿನ ಪ್ರಕಾರ, 'ಬಂಟಧಾರೆ' ಎಂದರೆ "ಬಂಟರ ಮದುವೆಯಲ್ಲಿ ಪುರೋಹಿತರಿಲ್ಲದೆ ಸೋದರ ಮಾವ-ಅತ್ತೆ ಹಾಗೂ ತಂದೆ-ತಾಯಿಗಳೇ ಧಾರೆಯೆರೆಯುವ ಸಂಪ್ರದಾಯ" (ಸಂಪುಟ 5: ಪುಟ 2185) ಬಂಟ ಧಾರೆ ಗೌಡರಲ್ಲಿ ಬಂದದ್ದಕ್ಕೆ ಜನಪದ ವಿವರಣೆ ಹೀಗಿದೆ, ಒಮ್ಮೆ ಒಂದು ಮದುವೆ ನಿಶ್ಚಯವಾಗಿತ್ತು. ಮದುವೆಯ ದಿನ ಅತಿಯಾದ ಮಳೆ ಬಂತು. ಮದುವೆ ಮನೆಗೆ ಭಟ್ಟರು ಬರಬೇಕಾದರೆ ನದಿಯೊಂದನ್ನು ದಾಟಬೇಕಿತ್ತು. ನದಿಯಲ್ಲಿ ಪ್ರವಾಹ ಹೆಚ್ಚಾದಂತೆ ಮದುವೆಯ ಮೂಹೂರ್ತ ಸಮೀಪಿಸಿತು. ಆಗ ಊರಿನ ಹಿರಿಯರು, ಗೌಡರು ತೀರ್ಮಾನಿಸಿದಂತೆ 'ಬಂಟಧಾರೆ'ಯಲ್ಲೇ ಮದುವೆಯಾಯಿತು. ಅಂದಿನಿಂದ ಗೌಡರ ಮದುವೆಯಲ್ಲಿ ಬಂಟಧಾರೆ ಪದ್ಧತಿ ಬಂತು. ಸುಳ್ಯದ ಅರಂತೋಡು, ಪುತ್ತೂರು, ವಿಟ್ಲದ ಕಡೆ ಬಂಟಧಾರೆಯನ್ನೇ 'ಗೌಡಧಾರೆ'ಯೆಂದು ರೂಢಿ ಮಾಡಿಕೊಂಡಿದ್ದಾರೆ. 2. ಬ್ರಾಹ್ಮಣ ಧಾರೆ ನಡೆಯುವುದಾದರೆ ಮದುವೆ ಮಂಟಪದಲ್ಲೇ ವೀಳ್ಯ ಕಟ್ಟುತ್ತಾರೆ. ಬ್ರಾಹ್ಮಣ ಧಾರೆಯು ವೈದಿಕ ಕ್ರಮದಲ್ಲಿ ನಡೆಯುತ್ತದೆ.
7. ಪೂ-ಶಿಂಗಾರ: ಬಣ್ಣ-ಬಂಗಾರ, ವೀಳ್ಯ: ಗಂಡಿನ ಕಡೆಯವರು ಹೆಣ್ಣಿಗೆ ಧಾರೆ ಸೀರೆ, ಹೂವು, ಬಣ್ಣ ಬಂಗಾರದ ಹರಿವಾಣವನ್ನು ಕೊಡುವ ಮೊದಲು ಈ ವೀಳ್ಯ ಕಟ್ಟುತ್ತಾರೆ.
8. ಗುರುವೀಳ್ಯ: ಗುರು-ಹಿರಿಯರನ್ನು ಗೌರವಿಸಿ ಈ ವೀಳ್ಯ ಕಟ್ಟುತ್ತಾರೆ.
9. ತಂದೆ ವೀಳ್ಯ: ತಂದೆಗೆ ಗೌರವ ಕೊಡುವ ವೀಳ್ಯ.
10. ತಾಯಿ ವೀಳ್ಯ: ತಾಯಿಗೆ ಗೌರವ ಕೊಡುವ ವೀಳ್ಯ.

11. ತೆರವು ವೀಳ್ಯ: ಗಂಡಿನ ಕಡೆಯವರು ಮದುವೆ ಮಂಟಪದಲ್ಲಿ ಹೆಣ್ಣಿಗೆ ರೂ. 10.50/- ಮತ್ತು ಒಂದು ಅಡಿಕೆಯನ್ನು ತೆರವು ಕಾಣಿಕೆಯಾಗಿ ನೀಡುವರು. ಇದನ್ನು ಹೆಣ್ಣಿನ ತಂದೆಯ ಮುಂಡಾಸಿನ ಒಂದು ತುದಿಯಲ್ಲಿ ಕಟ್ಟುತ್ತಾರೆ. ಇಲ್ಲಿ 'ತೆರ' ಎಂದರೆ ತೆರಿಗೆಯೆಂದೂ ಗಂಡು ಹೆಣ್ಣಿಗೆ ವಧು ದಕ್ಷಿಣೆ ಕೊಡುವ ಕ್ರಮವಿತ್ತು ಎಂಬ ಅಭಿಪ್ರಾಯವಿದೆ. ತೆರವು ಕಟ್ಟುವುದನ್ನು 'ಅಚ್ಚಿಕಟ್ಟುವುದು' ಎನ್ನುತ್ತಾರೆ.

12. ಸೋದರ ಮಾವ ವೀಳ್ಯ: ಸೋದರ ಮಾವ ಮದುಮಗಳನ್ನು ಧಾರಾ ಮಂಟಪಕ್ಕೆ ಕರೆತರುವುದು ಪದ್ಧತಿ. (ಬಂಟಧಾರೆಯನ್ನು ಇಲ್ಲಿ ನೆನಪಿಸಬಹುದು) ಗಂಡಿನ ಕಡೆಯವರು ಹೆಣ್ಣಿನ ಕಡೆಯ ಬಂಧುಗಳಿಗೆ, ನೆಂಟರಿಗೆ ಕೊಡುವ ಗೌರವದ ವೀಳ್ಯವಿದು. ಸೋದರ ಮಾವನಿಗೆ ಸೊಸೆಯನ್ನು ಕರೆ ತರುವ ಹಕ್ಕು ಈ ಗೌರವದ ಮೂಲಕ ಪ್ರಕಟವಾಗುತ್ತದೆ. ಗೌರವಿಸದಿದ್ದರೆ ಸೋದರ ಮಾವ ಮದುವೆಯನ್ನು ಧಿಕ್ಕರಿಸುವುದೂ ಇದೆ.

13. ತೆರವು ಮರೆವು ವೀಳ್ಯ: ಎರಡೂ ಕಡೆಯ ಗೌಡರಿಗೂ ಗೌರವಾರ್ಥ ಅವರವರ ಸಾಮರ್ಥ್ಯಾನುಸಾರ ವೀಳ್ಯ ಕಟ್ಟುತ್ತಾರೆ. ಇದರ ನಂತರ ಗಂಡಿನ ಮತ್ತು ಹೆಣ್ಣಿನ ಕಡೆಯ ಗೌಡರು ತೆರೆ-ಮರೆ ಹಿಡಿದು ನಿಲ್ಲುತ್ತಾರೆ. ಈ ಸಂದರ್ಭದಲ್ಲಿ ಹೆಣ್ಣು ಗಂಡು ಪರಸ್ಪರ ಎದುರಾಗಿ ನಿಲ್ಲುತ್ತಾರೆ.

ನಿಯಮಗಳು :

1. ಮದುವೆ ಸಂಪ್ರದಾಯದ ಪ್ರಕಾರ ಮದುವೆಗೆ ಒಂದುವಾರ ಅಥವಾ ಒಂದು ದಿನ ಮೊದಲು ವೀಳ್ಯ ಶಾಸ್ತ್ರ ನೆರವೇರುವುದು.
2. ವೀಳ್ಯ ಶಾಸ್ತ್ರ ಹೆಣ್ಣಿನ ಮನೆಯಲ್ಲೇ ನೆರವೇರುವುದು.
3. ವೀಳ್ಯವನ್ನು ಗಂಡಿನ ಕಡೆಯವರು ಹೆಣ್ಣಿನ ಮನೆಗೆ ತರಬೇಕು. ಪ್ರತಿಯೊಂದು ವೀಳ್ಯಕ್ಕೂ 5 ಕವಳೆ ವೀಳ್ಯದೆಲೆ 5 ಅಡಿಕೆಯ ಬಳಕೆ ರೂಢಿ. ಆದರೆ ಊರು ಗೌಡರ ಜಿಪುಣತನ, ಗಂಡಿನ ಡೆಯವರ ಬಂಡವಾಳವೇನೆಂದು ಅಳತೆ ಮಾಡಲು, ಆರಂಭದ ವೀಳ್ಯದಿಂದ ಕೊನೆಯ ವೀಳ್ಯಕ್ಕೆ ಬೆಸ ಸಂಖ್ಯೆ ಕ್ರಮದಲ್ಲಿ 3,5,7,9,11 ಕವಳೆ ಎಲೆಯಾಗಿ ಏರಿಸುತ್ತಾರೆ. (ಒಂದು ಕವಳೆಗೆ 20 ಎಲೆಯಿರುತ್ತದೆ).
4. ಸಂಪ್ರದಾಯದ ಪ್ರಕಾರ ವೀಳ್ಯ ಶಾಸ್ತ್ರಕ್ಕೆ 'ಗಂಡು' ಹೋಗುವ ಅವಶ್ಯಕತೆ ಇರುವುದಿಲ್ಲ. ಕೆಲವು ಊರುಗಳಲ್ಲಿ ಗಂಡು ಕಡ್ಡಾಯವಾಗಿ ಹೋಗುವಂತಿಲ್ಲ. ಇಲ್ಲೂ ಊರು ಗೌಡರ ನಿರ್ದೇಶನದಂತೆ ಗಂಡು ಹೋಗುವ-ಹೋಗದಿರುವ ಕ್ರಮ ನಡೆಯುತ್ತದೆ.
5. ವೀಳ್ಯ ಶಾಸ್ತ್ರದಲ್ಲಿ ಎರಡೂ ಕಡೆಯ ಕುಟುಂಬಸ್ಥರು ಭಾಗವಹಿಸುವರು. ಈ ಸಂದರ್ಭದಲ್ಲಿ ಮದುವೆಗೆ ಆಮಂತ್ರಿಸುವುದು, ಆಮಂತ್ರಣಕೊಡುವುದು. ಆಮಂತ್ರಣದಲ್ಲಿ ತಪ್ಪು-ಒಪ್ಪುಗಳಿದ್ದರೆ ಬಗೆಹರಿಸಿಕೊಳ್ಳುವುದಕ್ಕೆ ಅವಕಾಶವಿರುತ್ತದೆ.

**ಒಟ್ಟು ಅಭಿಪ್ರಾಯದಲ್ಲಿ 'ವೀಳ್ಯ ಶಾಸ್ತ್ರ'ವೆಂದರೆ,**

1. 'ದಿನಗೊತ್ತು ಮಾಡುವುದು', 'Engagement' ಪದಸೂಚಿಯಂತೆ ಪಾಶ್ಚಾತ್ಯ ಕ್ರಮ. ಗೌಡ ಸಂಸ್ಕೃತಿಯಲ್ಲಿ Ring marriage ನಂತಹ ಹೊಸ ಕ್ರಮವೂ ಇದೆ. ಭಾರತ ಸಂಸ್ಕೃತಿಯಲ್ಲಿ ದುಶ್ಯಂತ ಶಕುಂತಳೆಗೆ ಉಂಗುರ ತೊಡಿಸಿರುವುದು ಪುರಾಣದ ಕಾಲ್ಪನಿಕ ಉಲ್ಲೇಖವಷ್ಟೇ. ಜಾಗತೀಕರಣದೊಂದಿಗೆ ಸಾಂಸ್ಕೃತೀಕರಣವೂ ಪ್ರಗತಿ ಪರವೆಂದು ಒಪ್ಪುವ ಆಧುನೀಕರಣದಲ್ಲಿ ಗೌಡ ಸಂಸ್ಕೃತಿ ನಾಶವಾಗುತ್ತಿದೆ ಎಂದರೂ ತಪ್ಪಿಲ್ಲ.
2. ".... ಕೂಡ 'ಲಡಾಯಿ' ಮಾಡುವುದು ಊರು ಗೌಡರ ಅತೀ ಬುದ್ಧಿವಂತಿಕೆ, ಜಿಪುಣತನ ಅಥವಾ ಹೆಡ್ಡತನಗಳಿಂದ ವೀಳ್ಯ ಕಟ್ಟುವ ಪ್ರಾದೇಶಿಕ ವ್ಯತ್ಯಾಸ ಪ್ರತಿಯೊಂದು ಮದುವೆಯಲ್ಲೂ 'ಲಡಾಯಿ' ಮಾಡುವುದಕ್ಕೆ ಅವಕಾಶವಾಗುತ್ತದೆ. ಇಲ್ಲಿ ಇಬ್ಬರೂ ಗೌಡರ ನಡುವೆ ಹೊಂದಾಣಿಕೆಯಿದ್ದರೆ ಯಾವ ಲಡಾಯಿ ಆಗುವುದಕ್ಕೂ ಅವಕಾಶವಿರುವುದಿಲ್ಲ. ಊರು ಗೌಡರ ಭಿನ್ನಾಭಿಪ್ರಾಯಗಳಿಂದ ಮದುವೆ ನಿಲ್ಲುವ ಸಾಧ್ಯತೆಯೂ ಇರುತ್ತದೆ.
3. 'ಕರಾರು ಮಾಡುವುದು'. ಗೌಡ ಸಂಸ್ಕೃತಿಯಲ್ಲಿ ಮದುವೆಯು ಒಪ್ಪಂದದ ಮೂಲಕ ನೆರವೇರುತ್ತದೆ. ಶಾಸ್ತ್ರವೆಂಬ ಕಾರಣದಿಂದ ಮದುವೆಯು ಸುಸೂತ್ರವಾಗಿ ಏರ್ಪಡುತ್ತದೆ. ಗೌರವ ಕೊಡುವ ವೀಳ್ಯಶಾಸ್ತ್ರದಲ್ಲಿ ಕುಂಟು ನೆಪವೊಡ್ಡುವುದು ಆ ಮೂಲಕ ಕರಾರನ್ನು ಮುರಿಯುವುದು ಗೌಡ ಸಂಸ್ಕೃತಿಯ ಬೆಳವಣಿಗೆಯ ಲಕ್ಷಣವಲ್ಲ.

[ಈ ಬರಹದಲ್ಲಿ ಪುತ್ತೂರು ತಾಲೂಕಿನ ಕಾಣಿಯೂರು, ಬೆಳಂದೂರು ಮತ್ತು ಸುಳ್ಯ ತಾಲೂಕಿನ ಪೇರಾಲು-ಅಂಜ್ರೋಟಿಯಲ್ಲಿ ಬಳಕೆಯಲ್ಲಿರುವ ವೀಳ್ಯ ಶಾಸ್ತ್ರ ಕ್ರಮವನ್ನು ಅನುಸರಿಸಲಾಗಿದೆ.]

ಗಾದೆ

ಇಚ್ಚೆ ಇಲ್ಲದ ಗಂಡಂಗೆ ಮೊಸರಲ್ಲಿ ಕಲ್ಲ್.
ಉಂಬೊದು ರಾಗಿ ಅಂಬಿಲಿ, ಮೀಸೆ ಮೇಲೆ ಸಣ್ಣಕ್ಕಿ ಅನ್ನ.

# ಭಾಷೆ ಮತ್ತು ಸಂಸ್ಕೃತಿ

✍ ಜ್ಞಾನೇಶ್ ನಿಡ್ಯಮಲೆ

ಮಾನವನು ಜಗತ್ತಿನಲ್ಲಿ ಅತೀ ಬುದ್ಧಿವಂತ ಮತ್ತು ಶಕ್ತಿಶಾಲಿ ಜೀವಿಯಾಗಲು ಅವನಲ್ಲಿರುವ ಮಿದುಳು ಮತ್ತು ಅದರ ಬುದ್ಧಿ ಶಕ್ತಿಯೇ ಕಾರಣ. ಇತರ ಎಲ್ಲಾ ಜೀವ ಜಂತುಗಳಲ್ಲಿ ಇದರ ಕೊರತೆಯನ್ನು ಕಾಣುತ್ತೇವೆ. ಮಾನವನ ಬುದ್ಧಿಶಕ್ತಿ ಬೆಳವಣಿಗೆಗೆ ಹಲವಾರು ಕಾರಣಗಳಿವೆ. ಜ್ಞಾಪಕ ಶಕ್ತಿ, ಪಂಚೇಂದ್ರಿಯಗಳ ಸೂಕ್ಷ್ಮತೆ, ಮಾತನಾಡುವ ಸಾಮರ್ಥ್ಯ ಮೊದಲಾದವುಗಳು ಪ್ರಮುಖವಾಗಿವೆ. ಪ್ರಾಣಿಗಳಿಗೂ ಸಹ ಸ್ವರ ಹೊರಡಿಸುವ ಅಂಗವಿದ್ದು, ಸ್ವರಗಳನ್ನು ಹೊರಡಿಸಬಲ್ಲವು. ಆದರೆ ಸ್ವರಗಳ ಜೋಡಣೆ ಮತ್ತು ಸ್ವರಗಳಿಗೆ ಅರ್ಥವನ್ನು ಕೊಡುವ ಸಾಮರ್ಥ್ಯವಿಲ್ಲ. ಕೆಲವು ಸಂದರ್ಭಗಳನ್ನು ಹೊರತು ಪಡಿಸಿದರೆ ಅದರ ಸ್ವರಗಳನ್ನು ಇನ್ನೊಂದು ಪ್ರಾಣಿಗೆ ಅರ್ಥ ಮಾಡಿಕೊಳ್ಳಲಾಗುವುದಿಲ್ಲ. ಆದರೆ ಮನುಷ್ಯ ಮಾತ್ರ ಪ್ರತೀ ಸ್ವರಕ್ಕೂ ಅರ್ಥವನ್ನು ನೀಡಿ ಇನ್ನೊಬ್ಬರಿಗೆ ಅರ್ಥವಾಗುವ ರೀತಿಯಲ್ಲಿ ಹೇಳಬಲ್ಲ. ಸ್ವರಗಳನ್ನು ಜೋಡಿಸಿ ವಾಕ್ಯಗಳನ್ನು ಮಾಡಿ ಅದನ್ನು ಇನ್ನೊಬ್ಬರಿಗೆ ಅರ್ಥವಾಗುವ ರೀತಿಯಲ್ಲಿ ಪ್ರಸ್ತುತ ಪಡಿಸಬಲ್ಲ. ಆದ್ದರಿಂದ ಮಾನವನ ವಿಕಾಸವಾಯಿತು.

ನಮ್ಮ ಮನಸ್ಸಿನಲ್ಲಿ ಮೂಡುವ ಭಾವನೆಗಳು, ಅಲೋಚನೆಗಳು ಹಾಗೂ ವಿಷಯಗಳನ್ನು ಇನ್ನೊಬ್ಬರಿಗೆ ತಿಳಿಯಪಡಿಸಲು ನಮಗೆ ಮಾತು ಮತ್ತು ಬರಹ ಪರಿಣಾಮಕಾರಿಯಾದ ಅಸ್ತ್ರ. ಇತ್ತೀಚಿನ ದಿನಗಳಲ್ಲಿ ಇನ್ನೊಂದು ಮಾಧ್ಯಮವಾದ ಗಣಕಯಂತ್ರದ ನೆರವನ್ನು ಸಹ ನಾವು ಬಳಸಿಕೊಳ್ಳುತ್ತಿದ್ದೇವೆ. ಮಾತನಾಡಲು ಯಾವ ಸಲಕರಣೆಗಳ ಅಗತ್ಯ ಇರುವುದಿಲ್ಲ. ಕಾಡಿನಲ್ಲಿ ವಾಸಮಾಡುವವರೂ ಸಹ ಮಾತನಾಡಬಹುದು. ಮಗು ಹುಟ್ಟಿನಿಂದಲೇ ತನ್ನ ಬೇಡಿಕೆಗಳನ್ನು ಮುಂದಿಡಬಲ್ಲದು. ಮನುಷ್ಯನ ದೇಹರಚನೆಯಲ್ಲಿಯೇ ಮಾತನಾಡುವ ಧ್ವನಿಪೆಟ್ಟಿಗೆಯ ನಿರ್ಮಾಣವಾಗಿವೆ. ಮಾತನಾಡಲು ನಮಗೆ ಬೇಕಾಗಿರುವುದು ಭಾಷೆ. ಭಾಷೆಯೆಂದರೆ ನಮ್ಮ ಅಭಿಪ್ರಾಯಗಳನ್ನೂ, ಅಲೋಚನೆಗಳನ್ನೂ ಇನ್ನೊಬ್ಬರೊಂದಿಗೆ ಹಂಚಿಕೊಳ್ಳಲು ಪ್ರಮುಖವಾದ ಮಾಧ್ಯಮ. ಜಗತ್ತಿನಲ್ಲಿ ಹಲವಾರು ಭಾಷೆಗಳನ್ನು ಕಾಣಬಹುದು. ಅಷ್ಟೇ ಏಕೆ ನಮ್ಮ ಭಾರತ ದೇಶದಲ್ಲಿ ಸುಮಾರು 600 ಕ್ಕೂ ಮಿಕ್ಕಿ ಭಾಷೆಗಳಿವೆ. ಭಾಷೆಗಳು ವಿವಿಧ ಜನಾಂಗಗಳ ಹಲವಾರು ವರ್ಷಗಳ ಬದುಕಿನ ಓಸ್ಗಲೆಯಿಂದ ರೂಪುಗೊಂಡಿವೆ. ಯಾವ ಭಾಷೆಯೂ ಮೇಲಲ್ಲ, ಯಾವ ಭಾಷೆಯೂ ಕೀಳಲ್ಲ. ಎಲ್ಲಾ ಭಾಷೆಗಳ ಮೂಲ ಉದ್ದೇಶ ಒಂದೇ ಆಗಿದೆ. ಯಾವ ಭಾಷೆಯನ್ನು ನಾವು ಕೆಟ್ಟದು ಅಥವಾ ಒಳ್ಳೆಯದು ಎನ್ನುವ ಹಾಗಿಲ್ಲ. ಯಾಕೆಂದರೆ ಭಾಷೆ ಅಂದರೆ ಪ್ರಸಾರ ಮಾಧ್ಯಮ. ಜಗತ್ತಿನಲ್ಲಿರುವ ಎಲ್ಲ ಭಾಷೆಗಳು ಸಮಾನವಾಗಿವೆ. ಕೆಲವು ಭಾಷೆಗಳ ಬಳಕೆ ಜಾಸ್ತಿ ಇರಬಹುದು, ಹೆಚ್ಚು ಜನ ಉಪಯೋಗಿಸಬಹುದು. ಉದಾ: ಇಂಗ್ಲಿಷ್ ಇವತ್ತು ಸಾರ್ವತ್ರಿಕ ಭಾಷೆಯಾಗಿದೆ. ಹೆಚ್ಚಿನ ದೇಶದ ಜನರು ಇಂಗ್ಲೀಷನ್ನು ಅರ್ಥಮಾಡಿಕೊಳ್ಳಬಲ್ಲರು ಮಾತನಾಡಬಲ್ಲರು ಹೊರತು ಅದು ಯಾವ ಭಾಷೆಗೂ ಹೆಚ್ಚಲ್ಲ ಅಥವಾ ಕಡಿಮೆಯಲ್ಲ.

ದಕ್ಷಿಣ ಕನ್ನಡದ ಸುಳ್ಯ, ಪುತ್ತೂರು, ಬೆಳ್ತಂಗಡಿ ಮತ್ತು ಕೊಡಗಿನಲ್ಲಿ ವಾಸಿಸುವ ಗೌಡ ಸಮುದಾಯದವರು ಪ್ರಾಮುಖ್ಯವಾಗಿ ಎರಡು ಭಾಷೆಗಳನ್ನು ಮಾತನಾಡಬಲ್ಲರು.-ಒಂದು ಗೌಡ ಕನ್ನಡ (ಅರೆಭಾಷೆ) ಮತ್ತೊಂದು ತುಳು. ತುಳು ಭಾಷೆಯನ್ನು ದ.ಕ. ಜಿಲ್ಲೆಯಲ್ಲಿ ಇನ್ನಿತರ ಹಲವಾರು ಜನಾಂಗದವರೂ ಉಪಯೋಗಿಸುತ್ತಾರೆ. ಅದು ಪ್ರಾದೇಶಿಕ ಭಾಷೆಯಾಗಿರುತ್ತದೆ. ಯಾವುದೇ ಒಂದು ಸಮಾಜದ ಭಾಷೆಯಾಗಿರದೆ ಒಂದು ಪ್ರದೇಶ ಭಾಷೆಯಾಗಿರುತ್ತದೆ.

ತುಳು ನಮ್ಮ ಜನಾಂಗಕ್ಕೆ ಸೀಮಿತವಾದ ಭಾಷೆಯಲ್ಲ. ಆದರೆ ಗೌಡ ಕನ್ನಡ ಅಥವಾ ಅರೆಕನ್ನಡ ಮಾತ್ರ ನಮ್ಮ ಜನಾಂಗವರೇ ಉಪಯೋಗಿಸುವ ಭಾಷೆ. ನಮ್ಮ ಪೂರ್ವಜರು ಈ ಭಾಷೆಯನ್ನು ಹಲವಾರು ವರುಷಗಳಿಂದ ಉಪಯೋಗಿಸಿಕೊಂಡು ಬಂದಿದ್ದಾರೆ. ಗೌಡ ಕನ್ನಡದಲ್ಲಿ ಕನ್ನಡದ ಪದಗಳನ್ನೆ ಅರ್ಥ ಮಾಡಿ ಅಥವಾ ಸಂಕ್ಷಿಪ್ತ ಮಾಡಿ ಮಾತನಾಡುತ್ತೇವೆ. ಉದಾ: ನಾನು ಹೋಗುತ್ತೇನೆ ಎಂಬ ವಾಕ್ಯವನ್ನು ನಾ ಹೋನೆ. ಊಟ ಮಾಡಿ ಆಯಿತಾ? ಊಟ ಆತಾ? ಎಂಬುದಾಗಿ ಕಡಿಮೆ ಪದಗಳನ್ನು ಉಪಯೋಗಿಸಿ ಬೇಗನೆ ಮಾತನಾಡುತ್ತೇವೆ. ಈ ಭಾಷೆಯಲ್ಲಿ (Short hand ಭಾಷೆ). ಕಡಿಮೆ ಸಮಯದಲ್ಲಿ ಹೆಚ್ಚು ವಿಚಾರಗಳನ್ನು ತಿಳಿಯಪಡಿಸಬಹುದು. ಆದ್ದರಿಂದ ಈ ಭಾಷೆಯನ್ನು ಅರೆಕನ್ನಡ (ಗೌಡ ಕನ್ನಡ)ವೆಂದು ಕರೆಯುತ್ತಾರೆ.

ನಮ್ಮ ಸಮಾಜದಲ್ಲಿ ಯಾವ ರೀತಿ ವರ್ಗ ತಾರತಮ್ಯ ಇದೆಯೋ? ಅದೇ ರೀತಿ ಭಾಷಾ ತಾರತಮ್ಯವೂ ಇದೆ. ಆ ಭಾಷೆ ಉಚ್ಚ, ಈ ಭಾಷೆ ನೀಚ ಎಂಬ ಧೋರಣೆಯಿದೆ. ನಮಗೆ ಚೈನೀಸ್ ಭಾಷೆ ಕೇಳುವಾಗ ಏನೋ ಒಂದು ತರಹದ ಭಾವನೆ ಉಂಟಾಗುತ್ತದೆ. ಯಾಕೆಂದರೆ ನಮಗೆ ಅದರ ಗಂಧ ಗಾಳಿಯೂ ಗೊತ್ತಿಲ್ಲ. ಆದರೆ ಚೈನಾದವರಿಗೆ ಅವರ ಭಾಷೆ ಶ್ರೇಷ್ಠ. ಅದೇ ರೀತಿ ಯಾವ ಭಾಷೆಯೂ ಅದನ್ನು ಉಪಯೋಗಿಸಿದವರಿಗೆ ಶ್ರೇಷ್ಠವಾಗಿರುತ್ತದೆ.

ಕೆಲವು ವರುಷಗಳ ಹಿಂದೆ ಕೊಡಗಿನಲ್ಲಿ ವಾಸಿಸುವ ಗೌಡರು ನಮ್ಮ ಭಾಷೆಯನ್ನು ಮಾತನಾಡಲು ಹಿಂಜರಿಯುತ್ತಿದ್ದರು.

ಯಾಕೆಂದರೆ ಕೊಡಗಿನಲ್ಲಿ ವಾಸಿಸುವ ಬಹು ಸಂಖ್ಯಾತರಾಗಿದ್ದ ಕೊಡಗರು ನಮ್ಮ ಜನಾಂಗವನ್ನು ಕೀಳಾಗಿ ಕಾಣುತ್ತಿದ್ದು, ಅವಹೇಳನ ಮಾಡುತ್ತಿದ್ದರು. ಇದರಿಂದಾಗಿ ನಮ್ಮ ಜನಾಂಗದವರು ಅರೆ ಭಾಷೆಯನ್ನು ಮಾತನಾಡದೆ ಕನ್ನಡ ಅಥವಾ ಇನ್ನಿತರ ಭಾಷೆಗಳನ್ನು ಮಾತನಾಡಲು ರೂಢಿ ಮಾಡಿಕೊಂಡಿದ್ದರು. ಆದರೆ ಸಮಾಜದ ಕೆಲವು ಹಿರಿಯರು ಮುಖ್ಯವಾಗಿ ದಿ| ನಿಡ್ಯಮಲೆ ಮುದ್ದಪ್ಪ ಮತ್ತು ನಿಡ್ಯಮಲವೆ ಸೋಮಣ್ಣನವರು ನಮ್ಮ ಭಾಷೆಯನ್ನು ಮಾತನಾಡುವಂತೆ ಜನರನ್ನು ಪ್ರೇರೇಪಿಸಿದ್ದರು. ನಮ್ಮ ಭಾಷೆ ಯಾವ ಭಾಷೆಗೂ ಕಡಿಮೆಯದ್ದಲ್ಲ. ಅದನ್ನು ಮಾತನಾಡಿದರೆ ಯಾವ ಕೀಳರಿಮೆಯೂ ಇಲ್ಲ. ಬದಲಾಗಿ ನಮ್ಮ ಕೀಳರಿಮೆಯನ್ನು ನಾವು ಮಾಡುವ ಕೆಲಸದಿಂದ ಗಳಿಸಿಕೊಳ್ಳುವ ವಿದ್ಯೆಯಿಂದ ಹೋಗಲಾಡಿಸಬೇಕೆ ಹೊರತು ನಮ್ಮ ಮಾತೃ ಭಾಷೆಯನ್ನು ಮಾತನಾಡದಿರುವುದರಿಂದ ಅಲ್ಲ ಎಂಬುದಾಗಿ ಜನಾಂಗವರಿಗೆ ಧೈರ್ಯ ತುಂಬುತ್ತಿದ್ದರು. ಜನಾಂಗದ ಯಾವನೇ ವ್ಯಕ್ತಿ ನಮ್ಮ ಭಾಷೆಯನ್ನು ಮಾತನಾಡದೆ ಕನ್ನಡ ಅಥವಾ ಇನ್ನಿತರ ಭಾಷೆಗಳನ್ನು ರೂಪಿಸಿಕೊಂಡಿರುತ್ತಾನೆ. ಕೆಲವರಂತೂ ಅರೆ ಕನ್ನಡ ಗೊತ್ತಿದ್ದರೂ ಗೊತ್ತಿಲ್ಲದವರ ಹಾಗೆ ನಟನೆಯನ್ನು ಮಾಡುತ್ತಾರೆ. ಇನ್ನು ಕೆಲವು ಸಂದರ್ಭಗಳಲ್ಲಿ ತಂದೆ ತಾಯಿಯರೇ ಮಕ್ಕಳೊಂದಿಗೆ ನಮ್ಮ ಭಾಷೆಯಿಂದ ವ್ಯವಹರಿಸದೆ ಕನ್ನಡದಲ್ಲಿಯೇ ವ್ಯವಹರಿಸುತ್ತಾರೆ. ಕನ್ನಡ ನಮ್ಮ ರಾಜ್ಯ ಭಾಷೆ ನಿಜ. ನಾವು ಕನ್ನಡವನ್ನು ಎಲ್ಲಿ ಬೇಕಾದರೂ ಮಾತನಾಡಬಹುದು. ಇನ್ನು ಕೆಲವು ಸಂದರ್ಭಗಳಲ್ಲಿ ನಮ್ಮ ಸಂಬಂಧಗಳು ಹಾಸನ, ಮಂಡ್ಯ, ಮೈಸೂರು, ಶಿವಮೊಗ್ಗ, ಚಿಕ್ಕಮಗಳೂರು ಮುಂತಾದ ಕಡೆಯಿಂದ ಆದರೆ, ಕನ್ನಡ ಮಾತನಾಡುವ ಹುಡುಗಿ ಮನೆಗೆ ಬಂದರೆ, ಪತಿ ಅರೆಭಾಷೆಯವನಾದರೂ ಪತ್ನಿಗೆ ಮತ್ತು ಮಕ್ಕಳಿಗೆ ಅರೆಭಾಷೆಯನ್ನು ತಿಳಿಯಪಡಿಸದೇ ಕನ್ನಡದಲ್ಲೇ ಮಾತನಾಡುವ ರೂಢಿಯಾಗಿಬಿಟ್ಟಿದೆ. ಒಂದು ಕೊಂಡಿ ತಪ್ಪಿದರೆ ಮುಂದೆಂದೂ ಅವರು ನಮ್ಮ ಭಾಷೆಯನ್ನು ಮಾತನಾಡಲಾರರು. ನಾವು ಯಾವ ಭಾಷೆಯನ್ನಾದರೂ ಕಲಿಯಬಹುದು. ಆದರೆ ಮಾತೃಭಾಷೆಯನ್ನು ಮನೆಯಲ್ಲಿಯೇ ಕಲಿಯಬೇಕು. ಮನೆಯಲ್ಲಿ ನಮ್ಮ ಭಾಷೆ ಕಲಿಯದಿದ್ದರೆ ಅವನು ಅಥವಾ ಅವಳು ಮುಂದೆಂದೂ ನಮ್ಮ ಭಾಷೆಯನ್ನು ಕಲಿಯಲು ಹೋಗುವುದಿಲ್ಲ.

ನಮ್ಮ ಜನಾಂಗದವರು ತಮ್ಮ ಆತ್ಮ ವಿಶ್ವಾಸವನ್ನು ಹೆಚ್ಚಿಸಿಕೊಂಡು ಭಾಷೆಯ ಬಗ್ಗೆ ಅಭಿಮಾನ ಹೊಂದಿದವರಾಗಬೇಕು. ನಮ್ಮ ಭಾಷೆಯ ಬಗ್ಗೆ ಅಭಿಮಾನ ಇಲ್ಲದಿದ್ದರೆ ಬೇರೆಯವರಿಗೆ ಹೇಗೆ ಮೂಡಬೇಕು. ಅರೆಭಾಷೆ ಕೆಲವು ಸಂದರ್ಭಗಳಲ್ಲಿ ಬರೇ ಜನಾಂಗದ ಭಾಷೆಯಾಗಿರದೆ ಇಡೀ ಊರಿನ ಭಾಷೆಯಾಗಿರುತ್ತದೆ. ಉದಾ: ಕೊಡಗು ಜಿಲ್ಲೆಯ ಪೆರಾಜೆ ಗ್ರಾಮದಲ್ಲಿ ಗ್ರಾಮದ ಶೇಕಡ 95 ಮಂದಿ ಅರೆ ಭಾಷೆ ಮಾತನಾಡುತ್ತಾರೆ. ಮುಸ್ಲೀಂರು, ಮರಾಠಿಗಳು, ಮಲೆಕುಡಿಯರು, ಬ್ರಾಹ್ಮಣರು ಬಂಟರು ಹಾಗೂ ಇನ್ನಿತರ ಜನಾಂಗದವರೂ ನಿರರ್ಗಳವಾಗಿ ಮಾತನಾಡುತ್ತಾರೆ. ಇತ್ತೀಚಿನ ದಿನಗಳಲ್ಲಿ ಯುವಕರಲ್ಲಿ ನಾವು ಈ ಪ್ರವೃತ್ತಿಯನ್ನು ಕಾಣುವುದಿಲ್ಲ. ಅದಕ್ಕೆ ಕಾರಣರು ನಾವೇ. ಯಾಕೆಂದರೆ ನಾವಾಗಿಯೇ ಅವರೊಂದಿಗೆ ಅವರ ಭಾಷೆಯಲ್ಲೇ ವ್ಯವಹರಿಸುವ ಹೃದಯ ವಿಶಾಲತೆಯನ್ನು ಹೊಂದಿದ್ದೇವೆ. ನಾವು ಅವರ ಭಾಷೆಯನ್ನು ಅಥವಾ ಕನ್ನಡವನ್ನು ಕಲಿತುಕೊಳ್ಳುವ, ಆದರೆ ನಮ್ಮ ಭಾಷೆಯನ್ನು ಹೆಚ್ಚು ಹೆಚ್ಚು ಜನರಿಗೆ ತಲುಪಿಸ ಬೇಕಾಗಿದೆ. ಇದಾಗದಿದ್ದರೆ, ನಾವಾದರೂ ಅರೆಭಾಷೆಯನ್ನು ಉಪಯೋಗಿಸೋಣ. ಭಾಷೆಯನ್ನು ನಾವು ಮರೆತರೆ, ನಮ್ಮ ಸಂಸ್ಕೃತಿಗೆ ಅಪಚಾರ ಎಸಗಿದಂತೆಯೇ. ನಮ್ಮ ಭಾಷೆಯನ್ನು ಪೋಷಿಸುವ ಕೆಲಸ ನಮ್ಮಿಂದಲೇ ಆಗಬೇಕು. ಪ್ರತಿಯೊಂದು ಜನಾಂಗದವರಿಗೆ ಅವರವರ ಭಾಷೆ ಬಗ್ಗೆ ಅಭಿಮಾನ ಇರಬೇಕು. ನಾವು ಭಾಷೆಯನ್ನು ಮರೆತರೆ ಮುಂದೊಂದು ದಿನ ನಮ್ಮ ಭಾಷಾ ಸಂಸ್ಕೃತಿ ನಾಮಾವಶೇಷವಾಗಬಹುದು. ಇವತ್ತಿಗೂ ಹಲವು ಜನಾಂಗದವರು ಅವರವರ ಭಾಷೆಯನ್ನು ಪ್ರೇಮಿಸುತ್ತಾರೆ. ಪೋಷಿಸುತ್ತಾರೆ. ನಾವು ಕೂಡ ನಮ್ಮ ಭಾಷೆಯನ್ನು ಪ್ರೇಮಿಸಿ ಉಪಯೋಗಿಸೋಣ. ಸಾಧ್ಯವಾದರೆ, ಹತ್ತು ಹಲವು ಮಂದಿಗೆ ನಮ್ಮ ಭಾಷೆಯನ್ನು ಕಲಿಸೋಣ. ನಾವು ಎಂದೆಂದೂ ಭಾಷೆಯ ಬೆಳವಣಿಗೆಗೆ ಮುಳ್ಳಾಗುವುದು ಬೇಡ. ●

## ವಿಪರ್ಯಾಸ

ಮದ್ದಾನೆಗಾದರೋ ಹಾಕಬಹುದು
ಅಂಕುಶ
ಗೆದ್ದಾಗ ರಾಜಕಾರಣಿಗಳೇ
ನಿರಂಕುಶ

-ಪುರುಷೋತ್ತಮ ಕೆ. ಕರಂಗಲ್ಲು

ಗಾದೆ

ಉಂಡ ಮನೆಗೆ ಗುಂಡು ಹೊಡಿಯುವಂವ.
ಉದೂದು ಪುರಾಣ ಹಾಕುದು ಗಾಣ.

# ಸಾಂಸ್ಕೃತಿಕ ವಿಘಟನೆ ಮತ್ತು ಗೌಡರ ವಾಸ್ತು ಕೌಶಲ್ಯ

ಎ.ಕೆ. ಹಿಮಕರ

ಹಕ್ಕಿಗೆ ಗೂಡು, ಮನುಷ್ಯರಿಗೆ ಮನೆ ಎಲ್ಲರಿಗೂ ಬೇಕು ಮನೆ. ಮದುವೆ ಮಾಡಿನೋಡು, ಮನೆ ಕಟ್ಟಿನೋಡು. ಮನೆ ಕಟ್ಟುವುದರಲ್ಲಿ ಗೌಡರು ಮುಂದೆ. ಮೊದಲಿನಿಂದಲೂ ಮನೆ ಕಟ್ಟುವುದರಲ್ಲಿ ಗೌಡರು ಸ್ವತಂತ್ರರು. ಮಣ್ಣಿನಿಂದ ಮಾಡಿನವರೆಗಿನ ಎಲ್ಲಾ ಹಂತದ ಕೆಲಸವನ್ನು ಅವರೇ ಬಲ್ಲವರಾಗಿದ್ದರು. ಅದರಲ್ಲಿ ವಾಸ ಮಾಡುವವರೂ ಅವರೇ. ರಾಜನಿಗೆ ಮನೆ ಅಲ್ಲ ಅರಮನೆಬೇಕಾದರೂ ಗೌಡರದ್ದು ಪ್ರಮುಖ ಪಾತ್ರ. ಬ್ರಾಹ್ಮಣರು ಮತ್ತು ಕ್ಷತ್ರಿಯರಿಗೆ ದೇವರ ಮನೆ (ದೇವಸ್ಥಾನ) ಹಾಗೂ ಅರಮನೆಗಳನ್ನು ನಿರ್ಮಿಸುವ ತಂತ್ರಶಾಸ್ತ್ರ ತಿಳಿದಿದ್ದಿರಲಿಲ್ಲ. ಕೌಶಲ್ಯವೂ ತಿಳಿದಿರಲಿಲ್ಲ. ಜಲಮಟ್ಟ, ನೆಲಮಟ್ಟ, ಲಂಬವಾಗಿ ಗೋಡೆ ಏರಿಸುವುದು,ಮಾಡುಮಾಡುವ ತಂತ್ರಗಾರಿಕೆಗೆ ಅವರಿಗೆ ತಿಳಿದಿರದಿದ್ದ ಕಾರಣ ಗೌಡರ ಸಹಕಾರ ಯಾವಾಗಲೂ ಬೇಕಾಗುತ್ತಿತ್ತು. ಹಾಗಾಗಿ ಗೌಡರದ್ದು ಶ್ರಮ ಜೀವಿ ವರ್ಗ. ಕೃಷಿ ಉತ್ಪಾದನೆ ಮಾಡುವುದು, ದೇಶದ ಜನತೆಗೆ ಅಗತ್ಯದ ಆಹಾರವನ್ನು ಉತ್ಪಾದಿಸುವುದು, ಅವರಿಗೆ ವಾಸಕ್ಕೆ ಮನೆ ನಿರ್ಮಿಸುವುದು ಗೌಡರ ಪ್ರಮುಖ ಕ್ಷೇತ್ರಗಳಾಗಿದ್ದುವು ಗೌಡರು ವಾಸ್ತು ಕೌಶಲ್ಯವನ್ನು ರೂಢಿಗೆ ತರುವುದರಲ್ಲಿ ಪ್ರಮುಖ ಪಾತ್ರವಹಿಸಿದರು.

ಈ ಮೇಲಿನ ಪರಿಸ್ಥಿತಿ ಕ್ರಮೇಣ ಬದಲಾಗಿರುವುದನ್ನು ಗಮನಿಸಬಹುದು. ಬಡಗಿ, ಕಮ್ಮಾರ, ಕಂಚುಗಾರ, ಕಲ್ಲುಕೆಲಸಗಾರರ ಪ್ರತ್ಯೇಕ ವಲಯವನ್ನು ಬೃಹತ್ ವಾಸ್ತು ನಿರ್ಮಾಣದಲ್ಲಿ ಬೆಳೆಸಲಾಯಿತಾದರೂ, ಮನೆ ನಿರ್ಮಾಣದಂತಹ ಸರಳ, ಸುಂದರ, ಸೂಕ್ತ ಪರಿಣತಿಯನ್ನು ರೈತ ವರ್ಗ ಸ್ವತಂತ್ರವಾಗಿ ನಿರ್ವಹಿಸುತ್ತಾ ಬಂದಿವೆ. ಈ ಸ್ಥಿತಿಯು ಇಪ್ಪತ್ತನೆಯ ಶತಮಾನದ ಉತ್ತರಾರ್ಧದಲ್ಲಿ ತೀವ್ರ ಬದಲಾಗಿರುವುದು ಕಂಡು ಬರುತ್ತದೆ. ಅಂದರೆ, ವಸಾಹತುಶಾಹಿ ಆಳ್ವಿಕೆಯಲ್ಲಿ ಬ್ರಾಹ್ಮಣೇತರರಿಗೆ ಮೊದಲಬಾರಿಗೆ ಶಿಕ್ಷಣ ದೊರೆಯುವಂತಾಯಿತು. ಹಿಂದುಳಿದವರಾಗಿದ್ದ ಗೌಡರೂ ಓದು ಕಲಿತು ಆಧುನಿಕ ಜಗತ್ತಿಗೆ ತೆರೆದುಕೊಂಡರು. ಇದೀಗ ಈ ಜನಾಂಗವು ಶೈಕ್ಷಣಿಕ ಪ್ರಗತಿ ಸಾಧಿಸಿ ಸಮಾಜದ ಆಗು ಹೋಗುಗಳನ್ನು ನಿರ್ಣಯಿಸುವ, ನಿಭಾಯಿಸುವ ಪ್ರತಿಷ್ಠಿತ ಅಧಿಕಾರ ವಲಯದೊಳಗೆ ನುಸುಳಿರುವುದು ವ್ಯಕ್ತವಾಗುತ್ತಿದೆ. ಇದರ ಪರಿಣಾಮವಾಗಿ ಗೌಡ ಜನಾಂಗದ ಪರಂಪರಾಗತ ಕೌಶಲ್ಯ, ತಂತ್ರಶಾಸ್ತ್ರ ಕ್ಷೇತ್ರಗಳಲ್ಲಿ ಬದಲಾವಣೆ ಆಗಿದೆ. ಹೊಸತಲೆಮಾರಿಗೆ ಪರಂಪರೆಯ ಕೊಂಡಿ ತಪ್ಪಿಹೋಗಿರುವುದು. ಹೊಸ ಪರಿಸ್ಥಿತಿಯಲ್ಲಿ ಅತಂತ್ರವಾಗಿರುವುದು ತಿಳಿದು ಬರುತ್ತದೆ. ಹಾಗಾಗಿ ಪರಂಪರಾಗತ ಜ್ಞಾನದ ಬಗ್ಗೆ ಒಂದು ರೀತಿಯ 'ಡಿ ಲರ್ನಿಂಗ್'ಪ್ರಕ್ರಿಯೆ (De-learning procss)ಆರಂಭವಾಗಿದೆ ಎನ್ನಬಹುದು. ಹೊಸ ತಲೆಮಾರಿನ ಗೌಡ ಹಳೆಯದರೊಂದಿಗೆ ಗುರುತಿಸಿಕೊಳ್ಳಬಯಸದಿರಬಹುದು. 20ನೆಯ ಶತಮಾನದ ಅಂತ್ಯಕ್ಕೆ, ಹೊಸ ಪೀಳಿಗೆಯ ಆಲೋಚನೆ, ಚಿಂತನಾ ವಿಧಾನ , ಮೌಲ್ಯಗಳ ಬಗೆಗಿನ ನಿಷ್ಠೆ ತೀವ್ರ ಮಾರ್ಪಾಡಾಗಿದೆ. ಆಧುನಿಕ ಶಿಕ್ಷಣ ಆತನನ್ನು ಬಹಳವಾಗಿ ಬದಲಾಯಿಸಿದೆ. ಇಂತಹ ಸಂಕ್ರಮಣ ಪರಿಸ್ಥಿತಿಯಲ್ಲಿ ಗೌಡ ಜನಾಂಗದೊಂದಿಗೆ ಹರಿದು ಬಂದಿರುವ ಮನೆ ನಿರ್ಮಿಸುವ ಕುಶಲಕಲೆ ಯಾವ ಪರಿವರ್ತನೆಗೆ ಚಡಪಡಿಸುತ್ತಿದೆ ಎಂಬ ಒಂದು ಚಿಂತನೆಯನ್ನು ಮಾತ್ರ ಗುರುತಿಸುವ ಪ್ರಯತ್ನ ಇಲ್ಲಿ ಮಾಡಲಾಗಿದೆ.

**ಮನೆ ಸ್ಥಳ ಆಯ್ಕೆ :** ಗೌಡರು ಹಿಂದಿನಿಂದಲೂ ತಮ್ಮ ಕಸುಬಿಗೆ ಅನುಕೂಲವಾದ ಪ್ರದೇಶಗಳಲ್ಲೇ ಮನೆಮಾಡಿಕೊಂಡು ಬಂದಿದ್ದಾರೆ. ಬಯಲು ಸೀಮೆಯ ಗುಂಪು ಮನೆ (ಕ್ಲಸ್ಟರ್ಸ್)ಕಲ್ಪನೆ ಮಲೆನಾಡಿನಲ್ಲಿ ಬದಲಾಗಿ, ಒಂಟಿ ಮನೆಗಳ ಹೊಸ ಪರಂಪರೆ ಬೆಳೆದು ಬಂದಿದೆ. ಆದರೂ, ಮಲೆನಾಡಿನಲ್ಲೂ ಆರಂಭದ ದಿನಗಳಲ್ಲಿ ಗುಂಪು ಮನೆಗಳಲ್ಲೇ ಇದ್ದ ನಿದರ್ಶನಗಳಿವೆ. ಮನೆಕಟ್ಟುವಾಗ ಗೌಡರು ಯಾವುದೇ ಬ್ರಾಹ್ಮಣ ತಂತ್ರಿಗಳನ್ನಾಗಲೀ, ಕವಡೆಹಾಕುವ ಜ್ಯೋತಿಷಿಗಳನ್ನಾಗಲಿ ಕೇಳಿ ಮನೆಸ್ಥಳ ಆಯ್ಕೆ ಮಾಡುತ್ತಿದ್ದುದು ಕಂಡು ಬರುವುದಿಲ್ಲ. ಗಾಳಿಬೀಸುವ ದಿಕ್ಕು, ಸೂರ್ಯನ ಬೆಳಕು ಹರಿಯುವ ದಿಕ್ಕು, ಮಳೆನೀರು ಹರಿದು ಬರುವ ಪರಿಸ್ಥಿತಿ, ನೆಲದ ಮೇಲ್ಮೈ ಲಕ್ಷಣಕ್ಕೆ ಹೊಂದಿಸಿಕೊಂಡು ಮನೆಸ್ಥಳ ಆಯ್ಕೆ ಮಾಡುತ್ತಿದ್ದರು. ಜೊತೆಗೆ ಕೃಷಿ ಪ್ರದೇಶದ ನಿರ್ವಹಣೆಗೆ, ನೀರಿನ ಅನುಕೂಲತೆ, ಓಡಾಟಕ್ಕೆ ಅನುಕೂಲತೆ, ಸೊಪ್ಪು, ಸೌದೆಯ ಸೌಕರ್ಯ ಹೀಗೇ ತಮ್ಮ ಇರುವಿಕೆಗೆ ಅನುಕೂಲತೆ ಇರುವ ಜಾಗವೇ ಸೂಕ್ತವೆಂಬುದನ್ನು ಅವರು ಕಂಡುಕೊಂಡಿದ್ದರು. ಇದೇ ಅವರ ವಾಸ್ತು ಪರಿಕಲ್ಪನೆಗೆ ಮೂಲವಾಗಿತ್ತು. ಅಲ್ಲದೆ ನೈಜ,ಜನಪರ ವಾಸ್ತುಮೂಲವು ಇದೇ ಆಗಿರುತ್ತದೆ. ಇಷ್ಟೆಲ್ಲವನ್ನು ತಾವೇ ಸ್ವತಃ ನಿರ್ಧರಿಸಿಕೊಳ್ಳುತ್ತಿದ್ದರು.

**ಮನೆ ಸಮುಚ್ಚಯ :** ಗೌಡರ ಮನೆ ಅಂದರೆ ಒಂಟಿ ಕಟ್ಟಡಗಳಲ್ಲ. ಅದೊಂದು ಜೀವಂತ ಸಮುಚ್ಚಯ. ಮನೆಯೊಳಗೆ ಅವರ ಅಗತ್ಯಕ್ಕೆ ಹೊಂದಿಕೊಂಡು ಕೋಣೆಗಳ ವಿನ್ಯಾಸ, ವಿಸ್ತಾರ, ಗಾಳಿ ಬೆಳಕಿನ ಜೋಡಣೆ, ಮನೆಯ ಎದುರು ವಿಶಾಲವಾದ ಅಂಗಳ ಅದರಲ್ಲಿ ಕಣ ಕೈಹೊಡೆಯಲು, ಅಡಿಕೆ ಒಣಗಿಸಲು ಅನುಕೂಲತೆ, ಎದುರಿಗೆ ಗದ್ದೆ, ತೋಟ ಮೊದಲಾದ ಉತ್ಪಾದನಾ ಕ್ಷೇತ್ರ. ಮನೆಗೆ ತಾಗಿಕೊಂಡೇ ಕೊಟ್ಟಿಗೆ, ಕೋಳಿಗೂಡು, ಸೌದೆ ಕೊಟ್ಟಿಗೆ , ಹಟ್ಟಿ ಇತ್ಯಾದಿ. 'ಕೊಟಗೆ'ಬಹುಪ ಯೋಗಿ ಜಾಗ, ಭತ್ತಕುಟ್ಟುವ . ಶುಚಿಗೊಳಿಸುವ, ಹಂದಿ ಹಜಿರುಮಾಡುವ, ತರಕಾರಿ ಸಂಗ್ರಹಿಸುವ ಮೊದಲಾದ ಶೇಖರಣಾ ಜಾಗ. ಅಗತ್ಯಕ್ಕೆ ಮಲಗುವ ಜಾಗವೂ

ಆಗಿರುತ್ತದೆ. ದೀರ್ಘ ಮಳೆಗಾಲ ಇರುವುದರಿಂದ ಸೌದೆ ಸಂಗ್ರಹಣೆಗೆ ಪ್ರತ್ಯೇಕ ಜಾಗವಿರುತ್ತದೆ. ಮನೆಗೆ ಹತ್ತಿರದಲ್ಲೇ, ಯಾ ಕೊಟಗೆಯ (ಕೊಟ್ಟಿಗೆ)ಒಂದು ಬದಿ ಬೂದಿಹೊಂಡ ಇರುತ್ತದೆ. ಗೌಡರ ಮನೆಯ ಹೊರಭಾಗದಲ್ಲಿ ಬಚ್ಚಲು ಮನೆ ಇರುತ್ತದೆ. ಗೌಡರದ್ದು ಮೈದಣಿಕೆಯ ಕೆಲಸ, ಮನೆನಾಡಿನಲ್ಲಿ ಹವೆಗೆ ತಕ್ಕಂತೆ ಬಿಸಿನೀರು ಸ್ನಾನ ಅನಿವಾರ್ಯ. ಮಳೆಯಲ್ಲಿ ನೆನೆದು ಗದ್ದೆಯಿಂದಲೋ, ತೋಟದಿಂದಲೋ ಕಾಡಿನಿಂದಲೋ ಬಂದಾಗ ಬಿಸಿನೀರು ಸ್ನಾನ ದೇಹಕ್ಕೆ ಸುಖಕೊಡುತ್ತದೆ. ರಾತ್ರಿಮನೆಸೇರುವ ಮೊದಲು, ಯಾ ಊಟಕ್ಕೆ ಮೊದಲು ಸ್ನಾನ ಮಾಡದೆ ಇರುವುದಿಲ್ಲ. ಇದು ಅನಿವಾರ್ಯ. ಬ್ರಾಹ್ಮಣ ಮೊದಲಾದ ವಿಲಾಸಿ ಸಮುದಾಯಕ್ಕೆ ಬೆಳಗಿನ ಸ್ನಾನ ರೂಢಿಯಲ್ಲಿದೆ. ಆದರೆ ಹಗಲು ದುಡಿಯುವ ಗೌಡರಿಗೆ ಹಗಲಿನ ಸ್ನಾನ ಅಮುಖ್ಯವಾಗಿದೆ. ಹಾಗಾಗಿ ಬಚ್ಚಲು ಕಟ್ಟಡ ಗೌಡರ ಮನೆ ಸಮುಚ್ಚಯದ ಅವಿಭಾಜ್ಯ ಅಂಗ.

ಮನೆ ಸಮುಚ್ಚಯದ ಅವಿಭಾಜ್ಯ ಅಂಗಗಳಾಗಿ ತೊಂಡೆ ಮತ್ತು ಬಸಲೆ ಚಪ್ಪರಗಳಿರುತ್ತವೆ. ಬಚ್ಚಲು ನೀರು ಹರಿಯುವ ಜಾಗ ಮತ್ತು ಅಂಗಳ ಬದಿಯಲ್ಲಿ ತ್ಯಾಜ್ಯ ಎಸೆಯುವ ಜಾಗದಲ್ಲಿ ತೆಂಗು, ಅಡಿಕೆ ಮರಗಳಿರುತ್ತವೆ. ಕಾಲುತೊಳೆಯುವ ನೀರನ್ನು ತೆಂಗಿನ ಬುಡಕ್ಕೆ ಇಳಿಸುತ್ತಾರೆ. ಮನೆಯ ಸುತ್ತ ಕೊಳಚೆ ಇರಬಾರದೆಂಬುದೇ ಮೂಲ ಉದ್ದೇಶ. ಬೇಸುಗೆಯಲ್ಲಿ ನೀರು ಗುಂಡಿ ಬದಿಯಲ್ಲಿ ಗದ್ದೆಯೊಳಗೆ ಬಚ್ಚಲು ಸ್ಥಳಾಂತರಗೊಂಡು ಅಲ್ಲೊಂದು ತರಕಾರಿ ತೋಟ ನಿರ್ಮಿಸುತ್ತಾರೆ.(Kitchen garden) ಗೌಡರ ಪರಿಸರ ಸ್ವಚ್ಛತಾ ಪ್ರಜ್ಞೆ, ಕೊಳಚೆ ನಿರ್ವಹಣೆ,(drainage system) ತರಕಾರಿ ಉತ್ಪಾದನೆ, ವಾಸ್ತವ್ಯ ಸಮುಚ್ಚಯದೊಂದಿಗೆ ನಿಕಟವಾಗಿರುತ್ತದೆ. ಬಯಲು ಸೀಮೆಯ ಗೌಡರ ಮನೆಯ ಪ್ರವೇಶದ್ವಾರದಲ್ಲಿ(ಕಟ್ಟೆ)ಹಸಿಹುಲ್ಲು, ಒಳ್ಳಭಾಗ ಹಟ್ಟಿ(ಜಗಲಿ)ಅದರ ಒಳಭಾಗ ವಾಸದ ಕೋಣೆ ಅದರಾಚೆ ಅಡುಗೆ ಮನೆ ಇರುತ್ತದೆ.

ಮನೆ ಆಹಾರ ಸಂಬಂಧಿತ ವಿಚಾರವೂ ಹೌದು. ತರಕಾರಿ ಪೌಷ್ಟಿಕ ಆಹಾರವಾಗಿ ಮನೆ ಸುತ್ತ ಬೆಳೆದು ಕೊಳ್ಳುವುದರೊಂದಿಗೆ, ಕೋಳಿಗೂಡು, ಹಂದಿಗೂಡು, ಹಟ್ಟಿ ಇತರ ಅಂಗ ರಚನೆಗಳು, ಹಾಲು ಮತ್ತು ಮಾಂಸ ಉತ್ಪಾದನೆ ಗೌಡರ ಮನೆ ನಿರ್ವಹಣೆಯೊಂದಿಗೆ ಬೆಸೆದು ಕೊಂಡಿದೆ. ಗೌಡರು ಕೇವಲ ಮಾಂಸ ಭಕ್ಷಕರಲ್ಲ, ಉತ್ಪಾದಕರೂ ಹೌದು. ಅಡುಗೆಯ ಮಿಗತೆ ಆಹಾರ, ತ್ಯಾಜ್ಯ, ಕಲ್ಲುಗಚ್ಚು, ವ್ಯರ್ಥವಾಗುವ ತ್ಯಾಜ್ಯಗಳಲ್ಲ. ಮನೆ ಅಂದರೆ ಸಾಕು ಪ್ರಾಣಿಗಳ ಕೇಂದ್ರವೂ ಹೌದು, ನಾಯಿ ಮನೆ ರಕ್ಷಕ, ಜಾನುವಾರು ರಕ್ಷಕ, ಬೆಳೆರಕ್ಷಕ, ಮನೆಯವರ ಆಪ್ತ ಸಂಗಾತಿ. ಮನೆಯಲ್ಲಿ ನಾಯಿ ಪ್ರಮುಖ ಪೂರಕ ಉತ್ಪಾದಕ. ಹಟ್ಟಿಯ ಬಸವಣ್ಣ ಪ್ರಮುಖ(ಇಂಧನ)ಶಕ್ತಿಯ ಮೂಲ. ಗಾಡಿ ಎಳೆಯಲು, ಉಳುಮೆ ಮಾಡಲು ಆತನ ಸಹಕಾರ ಬೇಕೇ ಬೇಕು. ಹಟ್ಟಿಸೊಪ್ಪು ಹಾಸುವುದು ಜಾನುವಾರುಗಳ ಸುಖಕ್ಕಾದರೂ ಅದರ ಪರಿಣಾಮದ ಗೊಬ್ಬರ ಉತ್ಕೃಷ್ಟವಾಗಿದ್ದು, ಕೃಷಿಗೆ ಸೂಕ್ತವಾಗಿ ಮಣ್ಣಿನ ಫಲವತ್ತತೆಯನ್ನು ಪುನರ್ ಸೃಷ್ಟಿಸಲು ಸಹಕರಿಸುತ್ತದೆ. ಒಟ್ಟಿನಲ್ಲಿ ಮನೆ ಎಂದರೆ, ಕೇವಲ ಬೇಯಿಸುವ, ಉಣ್ಣುವ, ಮಲಗುವ, ಸಂತಾನೋತ್ಪತ್ತಿ ಮಾಡುವ ಜಾಗವಲ್ಲ. ಮನೆಯೆಂದರೆ ಜೀವ ಪೂರಕ ಜಾಲ. ಪರಸ್ಪರ ಹೊಂದಿಕೊಂಡು ಬದುಕಿ ಬಾಳುವ ಅಭಿವೃದ್ಧಿ ಪ್ರಕ್ರಿಯೆ ಪರಾವಲಂಬಿಗಳಾದರೂ ಪರಪೀಡಕವಲ್ಲ. ಇಲ್ಲಿ ಮಾನವ ಬದುಕಿನ ಜೀವಂತಿಕೆ ಇದೆ.

**ಗೌಡರಿಗೆ ಮಣ್ಣಿನ ನಂಟು :** ಗೌಡರ ಆರಾಧನಾ ಕ್ರಮದಲ್ಲಿ ಭೂಮಿಗೆ ಶ್ರೇಷ್ಟ ಸ್ಥಾನವಿದೆ. ಮರ, ಮರದಡಿಯ ಕಲ್ಲಿನಲ್ಲಿ ದೇವರನ್ನು ಕಾಣುತ್ತಾರೆ. ಕಾಡಿನಿಂದ ರಾಜನ ಭತ್ತ ತಂದರೂ, ರೊಟ್ಟಿ ಮಾಡಿ ತಾವು ತಿನ್ನುವ ಮೊದಲು ಅದೇ ಬಿದಿರ ಹಿಂಡಿಲ ಬುಡದಲ್ಲಿರಿಸುತ್ತಾರೆ. ಗೌಡರು ದೇವರನ್ನು ದೇವಸ್ಥಾನಗಳಲ್ಲಿ ಕಂಡುಕೊಂಡದ್ದು ತೀರಾ ಇತ್ತೀಚೆಗೆ. ಗದ್ದೆಗೋರಿ, ಕಂಬಳದ ನಂತರ ಬೆಲೆ ಬರಿಸಿದ ಬೀಜ ಹಾಕುವ ಮೊದಲು ಮಣ್ಣನ್ನು ಆರಾಧಿಸುತ್ತಾರೆ. ಯಾಕೆಂದರೆ ಮಣ್ಣಿನ ಮಹತ್ವ ತಿಳಿದವರಲ್ಲಿ ಗೌಡರು ಮೊದಲಿಗರು. ಕುಂಬಾರರಿಗೆ ಕೇವಲ ಆವೆ ಮಣ್ಣಿನ (ಒಂದು ವಿಧದ ಮಣ್ಣು ಮಾತ್ರ)ಸಹವಾಸ. ಗೌಡರಿಗೆ ಮಣ್ಣು ಸಮಷ್ಟಿಯ ಕೇಂದ್ರ. ಎಂತಹ ಮಣ್ಣೇ ಇರಲಿ ಅದನ್ನು ಹದಬರಿಸಿ ಅದರೊಳಗೆ ಬೀಜವೊಂದರ ಬೇರಿಳಿಸಿ, ಮಣ್ಣಿನ ಸತ್ವವನ್ನು ಕಣಕಣವಾಗಿ ಸಂಗ್ರಹಿಸಿ ಅನ್ನವಾಗಿ ಪರಿವರ್ತಿಸುವ ಕಲೆ ಇವರಿಗೆ ಮಾತ್ರ ತಿಳಿದಿರುವುದು. ಅದೇ ಮಣ್ಣನ್ನು ಹದಬರಿಸಿ ಮಳೆ, ಚಳಿ, ಗಾಳಿಗಳಿಂದ ರಕ್ಷಿಸಿಕೊಳ್ಳಲು ವಾಸ್ತು ನಿರ್ಮಿಸಿಕೊಳ್ಳುವುದರಲ್ಲಿ ಇವರು ಪರಿಣಿತರು. ರಾಜನಿಗೆ ಮಣ್ಣಿನ ಗುಣ ತಿಳಿಸಬೇಕಾದರೆ ರೈತ ನೊಬ್ಬನಿರಬೇಕು. ಇಂತಹ ವಿಶಿಷ್ಟ ಕೌಶಲ್ಯ ಗೌಡರಲ್ಲಿದೆ. ಬ್ರಾಹ್ಮಣ ಕ್ಷತ್ರಿಯ, ವೈಶ್ಯರಲ್ಲಿರದಿದ್ದ ಈ ವಿಶೇಷ ಜ್ಞಾನ ಗೌಡರಲ್ಲಿದ್ದ ಕಾರಣವೇ ಗೌಡರು'ಮಣ್ಣಿನ ಮಕ್ಕಳೆಂದು'ಗುರುತಿಸಲ್ಪಡುತ್ತಾರೆ.

ವಾಸದ ಮನೆ ಇರಲಿ,ಗುಡಿ-ಗೋಪುರ ಅರಮನೆಯೇ ಇರಲಿ, ಅದರ ವಾಸ್ತು ರಚನೆಯಲ್ಲಿ ಮಣ್ಣೇ ಮೂಲ ವಸ್ತು. ಬರೀ ಮಣ್ಣಿನಿಂದ ಸಂಪೂರ್ಣ ಮನೆ ನಿರ್ಮಿಸಲು ಸಾಧ್ಯ. ಜೇನುಗೂಡನ್ನು ಮಡಕೆಯೊಳಗಿರುವಂತೆ, ತಳ, ಗೋಡೆ, ಮಾಡು ಮಣ್ಣಿನಿಂದಲೇ ನಿರ್ಮಿಸಲಾಗುತ್ತಿತ್ತು. ಜೊತೆಗೆ ಕಲ್ಲು ಬಳಸುವುದನ್ನು ತಿಳಿದಿದ್ದಾರೆ. ಗೌಡರ ಹಳೆ ಮನೆಗಳಲ್ಲೆಲ್ಲಾ ಮಣ್ಣಿನಿಂದ ಮಾಡಿರುವ ನಾಡ ಹಂಚು ಬಳಕೆಯಾಗಿದೆ. ಹಂಚಿನ ಬದಲಿಗೆ ಸೋಗೆ,ಸೊಪ್ಪು, ಮುಳಿಹುಲ್ಲು ಬಳಕೆಯಾಗುತ್ತವೆ. ಕಡಿಮೆ ಮಳೆ ಪ್ರದೇಶದ ಗೌಡರು ಸರಳವಾಗಿ ಬೆಳೆಯುವ ರಾಗಿ ಆಹಾರ, ಸಾರಣೆ ಮಾಡಿದ ಮಾಡು (ಇಂದಿನ ತಾರಸಿಯಂತೆ)ರೂಢಿಗೆ ತಂದಿದ್ದಾರೆ. ಸಿಮೆಂಟಿಗೆ ಕೇವಲ 50ವರ್ಷ ಆಯುಷ್ಯದ ಗ್ಯಾರಂಟಿ ದೊರೆಯುವುದಾದರೆ ಮಣ್ಣಿನ ನಿರ್ಮಾಣಗಳು ನೂರಾರು ವರ್ಷಗಳಿಂದಲೂ ಸುಭದ್ರವಾಗಿ ಉಳಿದುಕೊಂಡಿವೆ.

**ತಂತ್ರಗಾರಿಕೆ :** ಆಯ್ದ ಮಣ್ಣನ್ನು ಕಲಸಿ ಕೊಳೆಯಿಸಿ ಹದ ಬರಿಸಿ, ದಳ (ತಳಕಟ್ಟು)ರಚಿಸುವುದು. ಅವಶ್ಯವಿದ್ದರೆ ಕಾಡುಕಲ್ಲು , ಕಡಿದ ಕಲ್ಲು ಬಳಸುವುದು. ದಳದ ಮೇಲೆ ನೇರವಾಗಿ ಗೋಡೆ

ನಿರ್ಮಿಸುವುದು. ಉಂಡೆ ಮಣ್ಣುಹಂತ ಹಂತವಾಗಿ ಬಳಸಿ ನಿಧಾನಕ್ಕೆ ಗೋಡೆ ಮೇಲೇಳುತ್ತದೆ. ಕಲ್ಲಿನಿಂದ ಗುದ್ದಿ, ಮಣೆಯಿಂದ ಹೊಡೆದು ಗೋಡೆಯನ್ನು ಬಿಗಿಗೊಳಿಸುವುದು. ಮರಹಾಸಿ, ಕಲ್ಲು ಚಪ್ಪಡಿ ಹಾಸಿ, ಅಟ್ಟ, ಬಳಿಕ ಮಾಳಿಗೆ ರಚನೆ. ಮಲೆನಾಡು , ಮಳೆನಾಡಾಗಿರುವ ಕಾರಣ ಇಳಿಮಾಡನ್ನು ಸೂಕ್ತವೆಂದು ವಿನ್ಯಾಸಗೊಳಿಸಿರುವುದು ಪ್ರಕೃತಿಯೊಂದಿಗೆ ಹೊಂದಿಕೊಂಡ ಲಕ್ಷಣವೆಂದೇ ಹೇಳಬಹುದು ಬಿದಿರನ್ನು ಇರಿಸಲು, ಗೋಡೆಯ ಮೇಲೆ ಚೌಕ ನಿರ್ಮಿಸಿ (wall plate) ಗೋಡೆಯನ್ನು ಬಂಧಿಸಲಾಗುತ್ತದೆ. ಸಮಾಂತರ ಅಡ್ಡ ಯಾ ಬೆನ್ನುಗೋಡೆ ರಚಿಸಿ, ಇಲ್ಲವಾದರೆ ಲಂಭವಾಗಿ ಕುತ್ತಿಕೋಲು ನಿಲ್ಲಿಸಿ, ಬೆರ್ರೋಳು ರಚಿಸುವುದು. ಅಲ್ಲಿ 'ಸೂಜಿಯ' ಸಹಾಯದಿಂದ ಬಿದಿರನ್ನು ಹೊರಗೋಡೆಯ ಮೇಲೆ ಇಳಿಬಿಡುವುದು. ಕೊಡಿಮೇಲೆ ಬುಡಕೆಳಗಾಗಿ ಇರಿಸಿದ ಬಿದಿರುಗಳನ್ನು ಅಡ್ಡ ತಟ್ಟೆಗಳಿಂದ ನೆಯ್ದು, ಹುಲ್ಲು, ಯಾ ಅಡಿಕೆ ಸೋಗೆ ಹಾಸುವ ತಂತ್ರ ವಿಶಿಷ್ಟವಾದ್ದು. ಅಟ್ಟ ಶೇಖರಣಾ ಜಾಗ ಬೆಚ್ಚಗೆ ಧಾನ್ಯ, ಆಹಾರ, ಸೊತ್ತುಗಳನ್ನು ಕೆಡದಂತೆ ಇಡುವ ಜಾಗವಾಗಿದೆ.

ಮಾಡು ಬೇಸಗೆಯಲ್ಲಿ ತಂಪನ್ನೂ, ಮಳೆಚಳಿಗಾಲದಲ್ಲಿ ಬೆಚ್ಚನ್ನೂ ಒದಗಿಸಬಲ್ಲುದು. ಧಾನ್ಯಗಳು ಹುಳಗಳಿಂದ ರಕ್ಷಿಸಲ್ಪಡುತ್ತವೆ. ಸದಾ ಅಡುಗೆ ಮನೆಯ ಬೆಂಕಿಯ ಬಿಸಿ, ಹೊಗೆ ಗಾಳಿ ಅನುಕೂಲಕ್ಕೆ ತಕ್ಕಂತೆ ನಿಯಂತ್ರಿಸಲಾಗುತ್ತದೆ. ಇವೆಲ್ಲಾ ಆಧುನಿಕ ರಚನೆಯಲ್ಲಿ ಕೊರತೆಗಳಾಗಿವೆ.

**ಬೆಸಗೆ :** ಗೌಡರ ಮನೆಗಳ ಬೆಸಗೆ ಅಥವಾ ದೆಂಗ(ತುಳು) ಒಂದು ವಿಶಿಷ್ಟ ಕಲ್ಪನೆ. ಅಡುಗೆ ಮನೆ ಅಂದರೆ, ಒಲೆ ಮತ್ತು ಬೆಸಗೆ. ಬೆಂಕಿ ಮಾಡಿ ಬೇಯಿಸುವ ಮತ್ತು ಅವಶ್ಯಕವಾದುದನ್ನು ಸೇರಿಸಿಡುವ ಸರಳ ವಿಧಾನ. ಬೇಟೆಯಾಡಿದ ಮಾಂಸವನ್ನು ಒಣಗಿಸುವ, ದಿನಬಳಕೆಯ ಬೇಯಿಸಿದ ಭತ್ತ ಒಣಗಿಸುವ, ಜಾಗ ತರಕಾರಿ ಬೀಜ, ಔಷಧೀಯ ತುಪ್ಪ, ಎಣ್ಣೆ ಮೊದಲಾದುವುಗಳನ್ನು ಇರಿಸುವ ಜಾಗ. ಉಪ್ಪಳಿಕೆ ಮೊದಲಾದ ಮರ ಬಳಸಿ ದಂಡೆ ಮಾಡಿ, ಅಡ್ಡ ಸಲಾಕೆ ಹಾಸಿ, ಮಣ್ಣು ಸವರಿ ಬೆಸಗೆಯನ್ನು ನಿರ್ಮಿಸಲಾಗುತ್ತದೆ. ವಿಶೇಷ ಅಡುಗೆ ಮಾಡಿದಾಗ, ಕೋಳಿಮಾಂಸ, ಬೇಟೆಯಾಡಿದ್ದ ಮಾಂಸ ಪದಾರ್ಥಗಳನ್ನು (ಗತಿಸಿದ್ದ ಹಿರಿಯರಿಗೆ)ಕೊಲೆಗಳಾಗಿಡಲು ಬೆಸಗೆ ಬೇಕಾಗುತ್ತದೆ.

**ಮನೆ ಮತ್ತು ಮಾಂಸಹಾರ :** ಕನ್ನೆಕಂಬ ಮನೆಯ ಪವಿತ್ರ ಜಾಗ ದೇವರ ಕೋಣೆಯಲ್ಲ. ನಡುಮನೆಯ ಕನ್ನೆಕಂಬ. ಗೌಡರ ಪರಂಪರೆಯಲ್ಲಿ ದೇವರ ಕೋಣೆಯ ಕಲ್ಪನೆಯೇ ಇಲ್ಲ ಎನ್ನಬಹುದು. ಗೌಡರ ಮನೆಯೊಳಗೆ ಮಾಂಸ ಮತ್ತು ಮದ್ಯ, (ಕಳ್ಳು, ಸಾರಾಯಿ) ಕ್ಕೆ ನಿಷೇಧವಿಲ್ಲ. ಬದಲಿಗೆ ಅದು ಪವಿತ್ರ ಸ್ಥಾನ ಪಡೆದುಕೊಂಡು ಬಂದಿದೆ. ಮನೆಯೊಳಗೆ ಗುರುಕಾರ್ನೂರಿಗೆ ಇಡುವುದು ಶ್ರೇಷ್ಠ ಕೆಲಸ, ದೈವಗಳಿಗೆ ಕಣು, ಕರ್ನ್ಯಾಟ ಇಡುವುದೇ ಶ್ರೇಷ್ಠ ಆರಾಧನಾ ವಿಧಿ ಕಳ್ಳು ಇಲ್ಲದಿದ್ದಲ್ಲಿ, ಕಳ್ಳಿನಿಂದ (ಇಂಗಿಸಿ) ತಯಾರಿಸಲಾಗಿರುವ ಓಲೆ ಬೆಲ್ಲವನ್ನು ನೀರುಮಾಡಿ ದೈವ ದೇವರಿಗೆ ಸಲ್ಲಿಸಲ್ಪಡಬೇಕು. ಇದೆಲ್ಲಾ ಮನೆಯೊಳಗೇ ನಡೆಯುವಂತಹದ್ದು. ಮನೆಯ ಆಯದೊಳಗೆ ಪ್ರಾಣಿ ಬಲಿ ರೂಢಿಯಲ್ಲಿಲ್ಲ. ಆದರೆ ಹೊರ ಆವರಣ, ಹಿತ್ತಲಿನಲ್ಲಿ ಹಂದಿಕೋಳಿ ತಲೆಕೊಯ್ಯುವ ಆರಾಧನಾ ವಿಧಾನಗಳಿವೆ. ದೈವಗಳ ಆರಾಧನಾ ಪರಿಕರಗಳು, ಮನೆಯೊಳಗೇ ಇರಬಹುದು.

ವಾಸ್ತು ಪರಿಕಲ್ಪನೆ ಮೂಲತಃ ವಾಸಸ್ಥರ ಅಂತರಿಕ ವ್ಯವಹಾರ ಚಟುವಟಿಕೆಗಳನ್ನಾಧರಿಸಿರುತ್ತವೆ ಎಂಬುದು ತಜ್ಞರ ಅಭಿಪ್ರಾಯ. ಆಧುನಿಕ ವಾಸ್ತುಶಿಲ್ಪಿ, ವಿನ್ಯಾಸಕಾರರಲ್ಲಿ ಪ್ರಸಿದ್ಧರಾಗಿರುವ ಲಾರಿಬೇಕರ್ ನಿರ್ಮಿಸುವ ಮನೆಗಳಲ್ಲಿ ರೈತ, ಡಾಕ್ಟರ್, ವ್ಯಾಪಾರಿ ಹೀಗೇ ವೃತ್ತಿಗನುಸಾರವಾದ ವಾಸ್ತು ವಿನ್ಯಾಸ ಮಾಡಲಾಗುತ್ತದೆ. ಪ್ರದೇಶವಾರು, ಸಾಂಸ್ಕೃತಿಕ ಹಿನ್ನೆಲೆ, ಕಚ್ಚಾ ಸಾಮಾಗ್ರಿಗಳ ದೊರೆಯುವಿಕೆ ಮತ್ತು ಖರ್ಚು ವೆಚ್ಚಗಳು, ಹವಾಗುಣ, ಮಳೆ ಆದರಿಸಿ ಕಿಟಿಕಿ, ಬಾಗಿಲು, ರಚನೆ ಮಾಡಲಾಗುತ್ತದೆ. ಆಗ ಮಾತ್ರ ಅದರೊಳಗೆ ಬದುಕು ಹಿತವೆನಿಸುತ್ತದೆ. ಇರುವೆ, ಪ್ರಾಣಿ ಪಕ್ಷಿಗಳಂತೆ ಮನುಷ್ಯನಿಗೂ ತನ್ನದೇ ಆದ ವಾಸ್ತವ್ಯದ ಮಿತಿಗಳಿರುತ್ತವೆ.

ಇಂದು ಗೌಡರ ಮನೆಗಳು ತೀವ್ರ ಗತಿಯಲ್ಲಿ ಆಧುನಿಕವಾಗುತ್ತಿವೆ. ತಾವು ಕಷ್ಟಪಟ್ಟು ಸಂಪಾದಿಸಿರುವ ಹಣವನ್ನು ಅಳತೆಮೀರಿ ವಿನಿಯೋಗಿಸಿದ ನಿದರ್ಶನಗಳಾಗುತ್ತಿವೆ. ಮನೆಗಳನ್ನು ತಮ್ಮ ಜೀವಿತಾವಧಿಯ ಸಾಧನೆಯ ಸ್ಮಾರಕಗಳನ್ನಾಗಿಸುತ್ತಾರೆ. ಮನೆಯೆಂದರೆ ವೈದಿಕರ ದೇವಾಲಯದ ಚಿಕಣಿಚಿತ್ರ (ಮಿನಿಯೇಚರ್) ಅದರೊಳಗಿರಬೇಕೆಂದುಕೊಂಡಿದ್ದಾರೆ. ಅಧಿಕ ಖರ್ಚು ಮಾಡಿದರೇನೇ ಒಳ್ಳೆಯ ಮನೆ ಸಾಧ್ಯ ಎಂಬ ಭ್ರಮೆಹೊಂದಿದವರಿದ್ದಾರೆ. ತಮ್ಮ ಸಂಸ್ಕೃತಿ ಪರಂಪರೆಗೆ ವಿರುದ್ಧವಾಗಿ ಮನೆಯೊಳಗೆ ಮಾಂಸಬೇಯಿಸುವುದನ್ನು ನಿಷೇಧಿಸಿಕೊಂಡಿದ್ದಾರೆ. ತಾವೇ ಅಭಿನವ ಬ್ರಾಹ್ಮಣರೆಂಬ ಸಂಸ್ಕೃತಿ ಪರಂಪರೆಗೆ ವಿರುದ್ಧವಾಗಿ ಮನೆಯೊಳಗೆ ಮಾಂಸ ಬೇಯಿಸುವುದನ್ನು ನಿಷೇಧಿಸಿಕೊಂಡಿದ್ದಾರೆ. ತಾವೇ ಅಭಿನವ ಬ್ರಾಹ್ಮಣರೆಂಬ ಸಾಂಸ್ಕೃತಿಕ ವಿಘಟನೆಯತ್ತ ಸರಿಯುವ ಲಕ್ಷಣ ಕಾಣಿಸತೊಡಗಿದೆ. (ಬ್ರಾಹ್ಮಣರಲ್ಲಿ ಮಾಂಸಹಾರದ ಬಗೆಗಿನ ಬಿಗಿ ಸಡಿಲವಾಗುತ್ತಿದ್ದರೂ). ತಮ್ಮ ಮನೆಯೊಳಗೆ ಅನಾದಿಕಾಲದಿಂದಲೂ ಜೊತೆಯಾಗಿ ಬಂದ ದೈವ ದೇವರುಗಳನ್ನು ಕನಿಷ್ಠ ಪ್ರಮಾಣಕ್ಕಿಳಿಸಲಾಗುತ್ತಿದೆ. ಮನೆಯೊಳಗೆ ಅವುಗಳು ತಮ್ಮ ಅಸ್ತಿತ್ವ ಕಳೆದುಕೊಳ್ಳುತ್ತಿವೆ. ಇಂದು ಗೌಡರದ್ದು ಬ್ರಷ್ಟ ಆಧುನಿಕತೆಗೆ ತೆರೆದುಕೊಳ್ಳುತ್ತಿರುವ ವಾಸಸ್ಥಳವಾಗಿದೆ.

# ಗೌಡರು ಗೌಡ ಕನ್ನಡ, ಇತ್ಯಾದಿ

ಪ್ರೊ. ಕೆ. ಕುಶಾಲಪ್ಪ ಗೌಡ

ಭಾರತದಲ್ಲಿ ವ್ಯಾಪಾರಕ್ಕಾಗಿ ಬಂದ ಬ್ರಿಟಿಷ್ ಈಸ್ಟ್ ಇಂಡಿಯಾ ಕಂಪೆನಿಯವರು ಇಲ್ಲಿಯ ರಾಜಕೀಯ ವ್ಯವಹಾರದಲ್ಲಿ ಮೂಗು ತೂರಿಸಿ ಕೊನೆಗೆ ನಮ್ಮ ದೇಶವನ್ನು ರಾಜಕೀಯ ದಾಸ್ಯಕ್ಕೆ ಒಳಗು ಮಾಡುವಲ್ಲಿ ಸಮರ್ಥರಾದರು. ಇವರನ್ನು ವಿರೋಧಿಸಿ ಅವರ ವಿರುದ್ಧ ಮೊದಲು ಸಮರ ಸಾರಿದವರು ಕೊಡಗು ಮತ್ತು ದಕ್ಷಿಣ ಕನ್ನಡ ಜಿಲ್ಲೆಯ ಸಾಮಾನ್ಯ ಜನರು. ಮಡಿಕೇರಿ, ಸುಳ್ಯ, ಪುತ್ತೂರು ಸೀಮೆಗಳಲ್ಲಿ ಬಹುಸಂಖ್ಯಾತರೂ ಪ್ರಭಾವಶಾಲಿಗಳೂ ಆಗಿದ್ದವರೆಂದರೆ ಗೌಡ ಜನಾಂಗದವರು. ಸಹಜವಾಗಿಯೇ ಇವರು ಈ ಕಾರ್ಯಭಾರದಲ್ಲಿ ಮುಂದಾಳುತ್ವ ವಹಿಸಿದ್ದರು. ಮಂಗಳೂರಿನಿಂದ ಬ್ರಿಟಿಷರನ್ನು ಹೊಡೆದೋಡಿಸಿ ಎರಡು ವಾರಗಳ ಕಾಲ ಮಂಗಳೂರಿನಿಂದ ರಾಜ್ಯಭಾರವನ್ನೂ ಮಾಡಿದರು. ಇದರ ಎಲ್ಲ ವಿವರಗಳನ್ನು ಶ್ರೀ ಎಸ್.ಎನ್. ದೇವಿ ಪ್ರಸಾದರು 'ಅಮರ ಸುಳ್ಯದ ಕ್ರಾಂತಿ' ಎಂಬ ಪುಸ್ತಕದಲ್ಲಿ ರೋಚಕವಾಗಿ ವರ್ಣಿಸಿದ್ದಾರೆ.

ಈ ಗೌಡರೆಂದರೆ ಯಾರು? ಇವರ ಮೂಲನೆಲೆ ಯಾವುದು ಎಂಬುದನ್ನು ನಿಖರವಾಗಿ ಹೇಳಲು ಬರುವುದಿಲ್ಲ. ಇವರಿಗೆ 10 ಕುಟುಂಬ 18 ಗೋತ್ರ ಎಂಬ ಸಂಪ್ರದಾಯವಿದೆ. ನಂದರು, ಬಂಗರು, ಮೂಲ್ಯಾರು, ಹೆಮ್ಮನ ಮುಂತಾಗಿ ಗೋತ್ರಗಳ ಹೆಸರುಗಳು. ಎಲ್ಲ 18 ಗೋತ್ರಗಳ ಹೆಸರು ದೊರೆಯುವುದಿಲ್ಲ. ಸಗೋತ್ರ ವಿವಾಹ ನಿಷಿದ್ಧವಿದೆ. ಈ ಗೋತ್ರ ವ್ಯವಸ್ಥೆಯೇ ಈ ಜನಾಂಗವನ್ನು ಗಟ್ಟದ ಮೇಲಣ ಒಕ್ಕಲಿಗ ಗೌಡರಿಂದ ಬೇರ್ಪಡಿಸುತ್ತದೆ. ಅವರಿಗೆ ಈ ತರಹದ ಗೋತ್ರ ವ್ಯವಸ್ಥೆ ಇರುವುದಿಲ್ಲ. ಈ ಕಾರಣದಿಂದೇನೋ ಹಿಂದೆ ಘಟ್ಟದ ಕೆಳಗೂ ಈ ಗೌಡರಿಗೂ, ಘಟ್ಟದ ಮೇಲೂ ಗೌಡರಿಗೂ ಮದುವೆ ಸಂಬಂಧಗಳು ಬೆಳೆಯುತ್ತಿರಲಿಲ್ಲ. ಆಧುನಿಕತೆಯ ಗಾಳಿ ಬಲವಾಗಿ ಬೀಸುತ್ತಿರುವುದರಿಂದ ಈಗ ಈ ಎರಡು ಪಂಗಡಗಳೊಳಗೆ ಕೊಟ್ಟು ತರುವ ಸಂಬಂಧಗಳು ಬೆಳೆಯುತ್ತಿವೆ. ಗಟ್ಟದ ಕೆಳಗಿನ ಪಂಗಡದೊಳಗೆಯೇ ಮದುವೆಗಳು ನಡೆಯುವಲ್ಲಿ ಮಾತ್ರ ಗೋತ್ರವನ್ನು ಪ್ರಧಾನವಾಗಿ ಇಂದಿಗೂ ಪರಿಗಣಿಸುತ್ತಾರೆ.

ಈ ಗೌಡರಿಗೆ ಎರಡು ಭಾಷೆಗಳು, ಕೊಡಗು ಮತ್ತು ಸುಳ್ಯ ತಾಲೂಕಿನ ಪ್ರದೇಶದಲ್ಲಿ ಕನ್ನಡದ ಒಂದು ಪ್ರಭೇದವನ್ನು ಮನೆ ಮಾತಾಗಿ ಬಳಸಿದರೆ ಪುತ್ತೂರು ತಾಲೂಕು ಹಾಗೂ ಅದರ ಪಶ್ಚಿಮ ಸೀಮೆಯಲ್ಲಿರುವವರು ತುಳು ಮಾತಾಡುತ್ತಾರೆ. ಈ ಭಾಷಾ ವ್ಯತ್ಯಾಸದ ಹೊರತು ಇವರ ನಡುವೆ ಇರುವ ಇತರ ಸಾಮಾಜಿಕ ಸಂಪ್ರದಾಯಗಳೆಲ್ಲ ಸಮಾನವಾಗಿವೆ. ಇವರಾಡುವ ಕನ್ನಡವನ್ನು 'ಗೌಡ ಕನ್ನಡ' ಎಂದು ಗುರುತಿಸಲಾಗಿದೆ. ಮೊದಲು ಈ ಭಾಷಾ ಪ್ರಭೇದವನ್ನು ಈ ಹೆಸರಿಂದ ಕರೆದವರು ಮದ್ರಾಸು ವಿ.ವಿ.ದಲ್ಲಿ ಕನ್ನಡ ಪ್ರೊಫೆಸರರಾಗಿದ್ದ ಮರಿಯಪ್ಪ ಭಟ್ಟರು. ಅವರನ್ನನುಸರಿಸಿ ನಾನೂ ಅದೇ ಹಸರಿಂದ ಇದನ್ನು ಗುರುತಿಸಿದೆ. ಹವ್ಯಕ ಕನ್ನಡ, ಕುರುಬ ಕನ್ನಡ ಎಂಬಂತೆ ಜನಾಂಗದ ಜಾತಿಯ ಮೇಲೆ ಭಾಷೆಯನ್ನು ಗುರುತಿಸುವ ವಾಡಿಕೆಯಂತೆ ಇಲ್ಲಿಯೂ ಮಾಡಿದೆ. ಆದರೆ ಬಹುಸಂಖ್ಯೆಯಲ್ಲಿ ತುಳು ಮಾತಾಡುವ ಗೌಡರು ಇದ್ದಾರೆಂದಾಗ 'ಗೌಡ ಕನ್ನಡ' ಎಂದು ಕರೆಯುವುದು ಸರಿಯಾದೀತೆ? ಎಂಬ ಪ್ರಶ್ನೆಯೇಳುತ್ತದೆ. ಇದನ್ನು ಇತರರು 'ಅರೆ ಭಾಷೆ' ಎಂದೂ 'ಅರೆ ಕನ್ನಡ'ವೆಂದೂ ಹೇಳುವುದುಂಟು. ಆದರೆ ಭಾಷೆಯಲ್ಲಿ ಅರೆ, ಕಾಲು, ಮುಕ್ಕಾಲು ಎಂದು ವಿಭಜಿಸಲು ಸಾಧ್ಯವಿಲ್ಲವಾದುದರಿಂದ ತಾತ್ಪೂರ್ತಿಕವಾಗಿ 'ಗೌಡ ಕನ್ನಡ' ಎನ್ನದೆ ಉಪಾಯವಿಲ್ಲ. ಈ ಭಾಷೆಯ ಸಂಪೂರ್ಣ ವ್ಯಾಕರಣವನ್ನು ಪುಸ್ತಕ ರೂಪದಲ್ಲಿ, ಆಧುನಿಕ ಭಾಷಾ ವಿಜ್ಞಾನ ರೀತಿಯಲ್ಲಿ 1970ರಲ್ಲಿ ನಾನು ಅಣ್ಣಾ ಮಲೈ ವಿ.ವಿ.ದಿಂದ ಪ್ರಕಟಿಸಿದ್ದೇನೆ.

(Dept. of Linguistics: Publication No: 20, Gowda Kannada By : Dr. K. Kushalappa Gowda Annamalai University, Annamalainagar, Tamilnadu, India, 1970)

ಈ ಕನ್ನಡ ಶಿಷ್ಟ ಕನ್ನಡ (= ಶಿಕ್ಷಣ, ಕೋರ್ಟು ಕಚೇರಿ ವ್ಯವಹಾರದಲ್ಲಿರುವ ಕನ್ನಡ)ಕ್ಕಿಂತ ಕೆಲವು ವೈಶಿಷ್ಟ್ಯಗಳನ್ನು ತೋರುತ್ತದೆ. ಇದರಲ್ಲಿ ಶಿ.ಕ.ಕ್ಕಿಂತ ಹೆಚ್ಚಿನ ಸ್ವರಗಳು ಧ್ವನಿಮಾಗಳಾಗಿವೆ. ಕಠಿಣ -ಮೃದು ವ್ಯಂಜನಗಳ ನಡುವೆ ಅರ್ಥ ವ್ಯತ್ಯಾಸ ವಿದೆ. ಉದಾ:- ಕಡಿ-ಗಡಿ. ಚಾರು–ಜಾರು , ಇತ್ಯಾದಿ. ಪದಗಳಲ್ಲಿರುವ ಎರಡನೆ ಸ್ವರ ಲೋಪಗೊಂಡು ಪದ ಸಂಕ್ಷಿಪ್ತತೆ ಯೊದಗುತ್ತದೆ. ಉದಾ : ಕರೆದು - ಕರ್ದ್, ಬರೆದು - ಬರ್ದ್, ಪದ-ವಾಕ್ಯ ಸಂಯೋಜನೆಯಲ್ಲಿ ಇನ್ನೂ ಕೆಲವು ವೈಶಿಷ್ಟ್ಯಗಳಿವೆ. ಸರ್ವನಾಮದಲ್ಲಿ ಪುಲ್ಲಿಂಗ ಮತ್ತು ನಪುಂಸಕ ಎಂಬ ಎರಡೇ ಭೇದಗಳು ಏಕವಚನದಲ್ಲಿ. ಶಿ.ಕ.ದಲ್ಲಿ ಅವನು ಅವಳು ಅದು ಎಂಬ ಮೂರು ಭೇದಗಳಿದ್ದರೆ ಗೌ.ಕ.ದಲ್ಲಿ ಅಂವ, ಅದ್ ಎಂಬ ಎರಡೇ ರೂಪಗಳು ಇವೆ. ಸ್ತ್ರೀ ಲಿಂಗ ನಪುಂಸಕ ಲಿಂಗದಲ್ಲಿ ಸಮಾವೇಷಗೊಳ್ಳುತ್ತದೆ. ಅದ್ ಬಾತ್ ಎಂದರೆ ಅವಳು ಬಂದಳು ಅಥವಾ ಅದು ಬಂದಿತು ಎಂದು. ಕ್ರಿಯಾಪದದಲ್ಲಿ ಪುಲ್ಲಿಂಗ - ನಪುಂಸಕ ವ್ಯತ್ಯಾಸವೂ ಇಲ್ಲ . ಅಂವ ಬಾತ್, ಅದ್ ಬಾತ್ =

ಅವನು ಬಂತು, ಅದು ಬಂತು ಎಂದು ಅರ್ಥ. ಬಹುವಚನದಲ್ಲಿ ಮೂರುಲಿಂಗಗಳಿಗೂ ಒಂದೇ ರೂಪ. ಶಿ.ಕ.ದಲ್ಲಿ ಮಹತ್ ಮತ್ತು ಅಮಹತ್ ಎಂಬ ಎರಡು ವರ್ಗಗಳಿವೆ . ಅವರು ಬಂದರು, ಅವುಗಳು ಬಂದವು. ಗೌ. ಕ. ದಲ್ಲಿ ಈ ಎರಡಕ್ಕೂ ಒಂದೇ ರೂಪ: ಅವು ಬಂದೊ= ಅವರು (ಗಂಡಸರು, ಹೆಂಗಸರು) ಅವುಗಳು (ಪ್ರಾಣಿಗಳು ) ಬಂದವು ಎಂದು ಸಂದರ್ಭಾನುಸಾರ ಅರ್ಥವಾಗುತ್ತದೆ. ಈ ಗೌ.ಕ. ದ ಲಿಂಗ ವ್ಯವಸ್ಥೆಯನ್ನು ವಿಶ್ಲೇಷಿಸಿದ ಡಾ । ಎಸ್.ವಿ. ಷಣ್ಮುಗಂ ಅವರು ಇದು ಪ್ರಾಗ್ದ್ರಾವಿಡ ವಿಭಜನೆಗೊಂಡಾಗ ಎರಡನೆಯ ಹಂತಕ್ಕೆ ಸರಿಯಾಗುತ್ತದೆ ಎಂದರೆ ಈಗ ಪಾಕಿಸ್ತಾನದ ಸಿಂದ್‌ನಲ್ಲಿ ಉಳಿದಿರುವ ಬ್ರಾಹೂಯಿ ಕವಲೊಡೆದ ಅತಿ ಪ್ರಾಚೀನ ಕಾಲಕ್ಕೆ ಸರಿಯಾಗುತ್ತದೆ ಎಂದು ಸಾಧಾರವಾಗಿ ನಿರೂಪಿಸಿದ್ದಾರೆ. ಹೀಗಾಗಿ ಈ ಭಾಷಿಕರ ಚರಿತ್ರೆ ಬಹು ಪ್ರಾಚೀನ ಕಾಲಕ್ಕೆ ಕೈ ಚಾಚುತ್ತದೆ— ಎನ್ನಬಹುದು.

ಹಿಂದೆ ಈ ಗೌ.ಕ. ಭಾಷೆಯನ್ನು ಕೌಟುಂಬಿಕ ನೆಲೆಯಲ್ಲಿ ಮಾತ್ರ ಮಾತಾಡುವುದಲ್ಲದೆ ಅನ್ಯರೆದುರು ಮಾತಾಡಲು ಅಂಜುತ್ತಿದ್ದರು. ಅದು ಸ್ವಾಭಿಮಾನದ ಕೊರತೆ. ಆದರೆ ಈಗ ಹಾಗಿಲ್ಲ. ಈ ಭಾಷಿಕರು ಪರಸ್ಪರ ಸಂಧಿಸಿದಾಗ ಇದರಲ್ಲೇ ಸಂಭಾಷಿಸುತ್ತಾರೆ, ಆದರೆ ಈಗ ಇನ್ನೊಂದು ಫ್ಯಾಷನ್ ಆರಂಭ ವಾಗಿದೆ. ಅಂದರೆ ಇಂದು ತುಳುವರೂ ಗೌ. ಕ. ಭಾಷಿಕರೂ ತಮ್ಮ ಮಕ್ಕಳೊಡನೆ ಶಿ. ಕ. ದಲ್ಲಿಯೇ ಮಾತಾಡುವ ಪರಿಪಾಠ ಸರ್ವತ್ರ ವ್ಯಾಪಿಸಿದೆ. ಇದರಿಂದ ಮುಂದಿನ ಜನಾಂಗಕ್ಕೆ ತಮ್ಮ ಹಿಂದಿನ ತಲೆಮಾರಿನಿಂದ ಬಂದ ಭವ್ಯ ಸಾಂಸ್ಕೃತಿಕ ಪರಂಪರೆಯ ಕೊಂಡಿಯೊಂದು ಕಳಚಿ ಹೋಗುತ್ತದೆ. ಅಂತಾಗಬಾರದು.

ಗೌ. ಕ. ವನ್ನು ಇತರ ಉಪಭಾಷೆಗಳೊಡನೆ ಹೋಲಿಸಿದರೆ ಹವ್ಯಕ ಕನ್ನಡ ಮತ್ತು ನೀಲಗಿರಿಯ ಬಡಗ ಕನ್ನಡದೊಡನೆ ನಿಕಟ ಹೋಲಿಕೆಯಿರುವಂತೆ ಕಂಡು ಬರುತ್ತದೆ. ಮೂಲತ: ಉತ್ತರ ಭಾಗದಲ್ಲಿ ನೆಲೆಯಾಗಿದ್ದ ಇವರು ಕ್ರಮೇಣ ದಕ್ಷಿಣಾಭಿಮುಖವಾಗಿ ವಲಸೆ ಬಂದಿರಬೇಕು. ಒಂದು ಶಾಖೆ ಮಲೆನಾಡು ಪ್ರದೇಶದಲ್ಲಿ ನೆಲೆಸಿತು. ಮತ್ತೊಂದು ಶಾಖೆ ತೀರ ದಕ್ಷಿಣದ ನೀಲಗಿರಿಯನ್ನು ಸೇರಿತು. ಇವರು ಬಡಗಣಿಂದ ಬಂದವರೆಂಬ ಕಾರಣದಿಂದ ಇವರನ್ನು 'ಬಡಗರು' ಎಂದು ಇತರರು ಕರೆದರು. ಇವರ ವ್ಯಕ್ತಿನಾಮ ದೊಂದಿಗೆ 'ಗೌಡ ' ಎಂಬ ಜಾತಿ ವಾಚಕವೂ ಸೇರಿಕೊಳ್ಳುವುದನ್ನು ಉದಾ: ಆರ್ಯಗೌಡರ್, ಇಂದಿಗೂ ಕಾಣಬಹುದು.' ಗೌಡ'ಎಂಬುದು 'ಗ್ರಾಮವೃದ್ಧ' (ಸಂ) ಗಾಮುಡ್ಡ (ಪ್ರಾ) ಗಾಮುಂಡ ಗಾವುಂಡ, ಗೌಡ ಎಂದಾಗಿದೆಯೆಂದು ಅಭಿಪ್ರಾಯವಿದೆ. ತುಳುನಾಡಿಗೆ ವಲಸೆ ಹೋದ ಗೌಡರು ತಮ್ಮ ಹಿಂದಿನ ಮನೆಮಾತಾಗಿದ್ದಿರಬಹುದಾದ ಗೌ.ಕ. ವನ್ನು ಬಿಟ್ಟು ಸ್ಥಳೀಯ ಪ್ರಭಾವಶಾಲಿಯಾದ ತುಳುವನ್ನು ತಮ್ಮ ಮಾತೃ ಭಾಷೆಯಾಗಿ ಬಳಸಿಕೊಂಡಿರಬೇಕು. ಅಂತೂ ಗೌಡ ಜನಾಂಗ ಮತ್ತು ಭಾಷೆ ಸಂಸ್ಕೃತಿಯನ್ನು ಕುರಿತು ತಳಸ್ಪರ್ಶೀಯಾದ ಅಧ್ಯಯನದ ಅಗತ್ಯ ತುಂಬ ಇದೆಯೆಂದು ಮಾತ್ರ ಹೇಳಬಹುದು.

## ಗೌಡ ಕನ್ನಡ

ಮನೆನ ಹೆಣ್ಣಿನ ಬುಟ್ನೆ ಚಾಳೆ ಹೆಂಡನ ಬುಟ್ನೆ
ಬುಡುಕಿಲ್ಲೆ ಕನ್ನಡಕೆ ಪ್ರಾಣವನೆ ಕೊಟ್ನೆ
ಹೇಳ್‌ಗಡ ರತ್ನ ನಾಬುಡಕಿಲ್ಲೆ ನನ್ನರೆಬಾಸೆ
ಹೆಂಡ ಹೆಣ್ಣಿನ ಜತೆಗೆ ಬೆಳೆಸಿನೆ ನನ್ನ ಹುರಿಮೀಸೆ

ಏ ಗೂಡೆನಯ್ಯೆ ನಿನ ಕೇಳ್ನೆ ಒಂದು ಮಾತು
ಯಾಕ್ಹೇಳ್ ನೀಹೊಯ್ದು ದೋಸೆಗೆ ನೂರು ತೂತ್
ಯಾಕೆಂತ ಹೇಳೊಕೊ-ನಾ ಪೊರ್ಲು ಹೆಣ್ಣ್
ಆಚೆ ಮನೆ ಹೈದ ಹಾಕಿದ ಮನೆಯ ಕಾವಲಿಗೆ ಕಣ್ಣ್

ಹೇಂಗೊಳರಿ ಭಾವ ಹೇಳೊಕು ಸಮಾಚಾರ
ಹೇಂಗುಟ್ಟು, ಈಗ ಮಂಜನ ಕಾರುಭಾರ
ಹೇಂಗೆ ನಡೆದದೆ ಹೇಳಿ ಅಳಿಯ ಸುದ್ದಿ
ಸರ್ತ ಮಾಡಿಕೆ ಬತ್ತ್ ನಾಯ್ಯಾಲ ಗುದ್ದಿ

✍ ಟಿ.ಜಿ. ಮುಡೂರು (ಕಾಜಾಣ)

## ಒಕ್ಕಲಿಗರು

ಒಕ್ಕಲಿಗರೆಂದಿಗೂ ಪುಕ್ಕಲಿಗರಲ್ಲ
ತಕ್ಕಲು ನೆಲದಲ್ಲೂ ಚಿನ್ನದ ಬೆಳೆ ತೆಗೆದು
ಅಕ್ಕರೆ, ಅಕ್ಕಸದಿ ಅನ್ಯರಿಗೆ
ಅನ್ನ ಇಕ್ಕಲು ತಿಳಿದವರು
ಒಕ್ಕತನದಿ ಬಾಳುವ ಅಕ್ಕಲು ಸಾರುವರು
ಮಿಕ್ಕೆಲ್ಲ ಮಂದಿಗೆ ದಿಕ್ಕು ದೆಸೆ ತೋರುವರು
ಮುಕ್ಕಲು ಹಾತೊರೆವ ತಿಕ್ಕಲರ ಬದಿಗಿರಿಸಿ
ದೇಶದ ಅಧಿಕಾರ ಚುಕ್ಕಾಣಿ ಹಿಡಿಯಬಲ್ಲವರು

✍ ವಿಜಯಕುಮಾರ್ ಕಾಣಿಚ್ಚಾರ್

# ಭಾಷೆ ಬೊಕ್ಕ ಸಂಸ್ಕೃತಿದ ಸಂಬಂಧೊ

✍ ಡಿ. ಯದುಪತಿ ಗೌಡ

ಮಾನವ ಸಮಾಜ ತನ್ನ ದಿನನಿತ್ಯದ ವ್ಯವಹಾರದ ಸಂಪರ್ಕೊಡು ನಿರ್ಮಾಣ ಮಲ್ತೊನ ಒಂಜಿ ಸಾಧನೆ ಪಂಡ ಭಾಷೆ. ಒಂಜಿ ಭಾಷೆದ ಉಗಮ ಏಪ ಆಂಡ್ ಪನ್ಪಿನವು ಭಾರಿ ಕಷ್ಟದ ವಿಷಯ. ಪ್ರಾಚೀನತೆನೆ ಒಂಜಿ ಭಾಷೆದ ಶ್ರೇಷ್ಠತೆ ಅತ್ತ್. ಶ್ರೇಷ್ಠತೆ ಪಂಡ ಒಂಜಿ ಭಾಷೆನ್ ಪಾತೆರುನ ಜನಾಂಗದ ಸಾಂಸ್ಕೃತಿಕ ಪ್ರಗತಿ ಬೊಕ ಅಕ್‌ಲೆನ ಚಟುವಟಿಕೆಲೆನ್ ಹೊಂದೊಂದುಂಡು.

ಭಾಷಾ ವಿಜ್ಞಾನಿಲೆನ ಪ್ರಕಾರೊ ಭಾಷೆ ಪಂಡ ಪಾತೆರ, ಲಿಪಿ ಎಂಚಿನ ಇತ್ತ್ಂಡಲಾ ಅವು ಒಂಜಿ ಸಾಧನ ಮಾತ್ರ. ಏತೋ ಜನಕುಲೆಡ ಲಿಪಿ ಇಪ್ಪುನ ಭಾಷೆನೆ ನಿಜವಾಯಿನ ಭಾಷೆ, ಶಿಷ್ಟವಾಯಿನ ಭಾಷೆ ಪನ್ಪಿ ಭಾವನೆ ನನಲಾ ಉಂಡು. ಉಂದು ಒಂಜಿ ತಪ್ಪು ಕಲ್ಪನೆ. ಒಂಜಿ ಭಾಷೆನ್ ಒಲ್ಪಾಂಡಲಾ ಒಂಜಿ ಲಿಪಿಟ್ ಬರೆಂಡಲಾ ಭಾಷೆ ಮಾತ್ರ ಒಂಜೇ. ಅಲ್ಪ ಭಾಷೆ ಬದಲಾಪುಜಿ. ಲಿಪಿ ಮಾತ್ರ ಬದಲಾಪುನ. ಬಾಷೆ ಬೊಕ್ಕ ಲಿಪಿಟ್ ಭಾಷೆನೆ ಪ್ರಾಚೀನವಾಯಿನವು. ಲಿಪಿ ಬೊಕ್ಕ ಉಂಡಾಯಿನವು.

ಪ್ರತಿಯೊರಿಲಾ ತನ್ನ ಬಾಲ್ಯಾವಸ್ಥೆಡ್ ಪ್ರಯತ್ನೊಡು ಭಾಷೆನು ಕಲ್ಪುವೆರ್. ಭಾಷಾ ವಿಜ್ಞಾನಿ ಒರಿಯನ ಪ್ರಕಾರೊ ಒಂಜಿ ವ್ಯಕ್ತಿ ತನ್ನ ಜೀವನೊಡು ಮಹಾತ್ ಕಾರ್ಯಲೆಡ್ ಎಲ್ಯೆಡ್ ಭಾಷೆನ್ ಕಲ್ಪುನಲಾ ಒಂಜಿ ಭಾಷೆದ ಉಪಯೋಗೊಲು ದಿಂಜ. ಭಾಷೆ ಪನ್ಪಿ ಬೊಲ್ಪು ಜೀವನದ ಉದ್ದೊಗುಲಾ ಬೆಳಗೊಂದಿಜ್ಜಿಡ ಲೋಕ ಪೂರಾ ಕತ್ತಲೆಡ್ ಮುರ್ಕುದು ಪೋತುಂದು ದಂಡೀ ಭಾರಿ ಪೊರ್ಲ್ಡು ಪಂತೆ. ಭಾಷೇ ನರಮಾನಿಯನ ಮನಸ್ಸ್‌ನ್ ಅರಲಾವುನ ಸಾಧನ ಮಾತ್ರ ಅತ್ತ್ ಆ ಸಾಧನೊಲೆಡ್ ಭಾರಿ ಪ್ರಮುಖವಾಯಿನವು. ಭಾಷೆ ಅಭಿಪ್ರಾಯಲೆನ್ ವ್ಯಕ್ತಪಡಿಸಾವುನ ಒಂಜಿ ವ್ಯವಸ್ಥೆ. ಭಾಷೆದ ಉಗಮುದ ಮಿತ್ತ್ ನಡತ್ತಿನ ವಾದ ವಿವಾದೊಲು ತರ್ಕೊಲು ಸಿದ್ಧಾಂತೊಲು ಬೇತೆ ವಾ ವಿಷಯದ ಮಿತ್ತ್‌ಲಾ ನಡತಿಜಿ.

ಭಾಷೆನ್ ಭಗವಂತೆನೆ ಸೃಷ್ಟಿ ಮಲ್ತ್‌ದೆಂದ್ ಪ್ರಾಚೀನ ಜನಕುಲು ನಂಬುದೆರ್. ಒಂಜಿ ವಸ್ತುನ ಏತೆಟ್ ಆ ವಸ್ತುದ ಪುದರ್‌ನ್‌ಲಾ ಸೃಷ್ಟಿ ಮಲ್ತ್‌ದೆರ್‌ಂದ್ ಅಕುಲು ನಂಬುದೆರ್. ಋಗ್ವೇದೊಡ್ ದೇವತೆಲು ವಾಗ್ದೇವಿನ್ ಸೃಷ್ಟಿ ಮಲ್ತೆರ್‌ಂದ್ ಪಂತ್‌ಂಡ್. ದೇವೆರ್ ಆಡಂ ಬೊಕ್ಕ ಈವೆರೆನ್ ಸೃಷ್ಟಿ ಮಲ್ತಿ ಬೊಕ್ಕ ಆಡಂ ವಾ ವಾ ವಸ್ತ್‌ಗ್ ವಾ ವಾ ಪುದರ್ ದೀದ್ ಲೆತ್ತೆನೋ ಅವ್ವೇ ಪುದರ್ ವಸ್ತುಲೆಗ್ ಒರಿಯಡ್‌ಂದ್ ಭಗವಂತೆ ಅನುಗ್ರಹ ಮಲ್ತ್‌ದೆರ್‌ಂದ್ ಬೈಬಲ್‌ದ ಜೆನೆಸಿಸ್ ಪನ್ಪಿ ಭಾಗೊಡ್ ಬರ್ಪುಂಡು. ಉಂದು ಕೇವಲ ನಂಬಿಕೆ. ಕಲ್ಪನೆಲು ಪನ್ಪಿನೆನ್ ತೆರಿಯಾವರೆ ನಮ ದೂರ ಪೋವೊಡುಂದಿಜ್ಜಿ. ವಸ್ತುಗುಲಾ ಅವೆನ್ ತೆರಿಪಾವುನ ಪದಕುಲಾ ಒಂಜಿ ರೀತಿದ ತಾತ್ವಿಕ ಸಂಬಂಧ ಉಂಡು ಪನ್ಪಿನ ನಂಬಿಕೆನೆ ಅವು ದೈವ ಮೂಲ ವಾದೊಗು ಸಂಬಂಧಪಟ್ಟಿನವು.

ಭಾಷೆ ಒಂಜಿ ಪ್ರಕೃತ್ತಿದತ್ತವಾಯಿನ ಕೊಡುಗೆ. ಸಾಮಾಜಿಕ ಸಮೂಹದ ಸಹಕಾರೊಗು ಕಾರಣವಾಯಿನವೇ ಭಾಷೆ. ವ್ಯವಹಾರದ ಸೌಲಭ್ಯೊಗು ನರಮಾನಿಯನ ಅನ್ವೇಷಣದ ಫಲನೇ ಭಾಷೆಯಾದುಂಡು. ಭಾಷೆಡ್ ವ್ಯಕ್ತಿ ವ್ಯಕ್ತಿಲೆನ ನಡುವೆ ವ್ಯವಹಾರೊ ಭಾರೀ ಸುಲಭ ಆತ್‌ಂಡ್. ಭಾಷೆ ಇಜ್ಜಂದೆ ಇನಿತ ದಿನೊಟು ನರಮಾನಿಯನ ದಿನನಿತ್ಯದ ಕಾರ್ಯಲಾ ನಡಪರೆ ಸಾಧ್ಯ ಇಜ್ಜಿ. ಗುಂಪು ಜೀವಿಯಾದಿತ್ತಿನ ನರಮಾನಿಯನ ಸಮಾಜ ಜೀವಿಯಾದ್ ಮಲ್ತ್‌ನವೆ ಭಾಷೆ.

ಜಗತ್ತ್‌ಡ್ ಸುಮಾರು ಸಾವಿರ ವರ್ಷೊಗು ದುಂಬೇ ಉಗಮವಾದೆ ಸಂಸ್ಕಾರ ಪಡೆವೊಂದು ಬತ್ತಿನ ಭಾಷೆ ಇನಿ ಸುಮಾರ್ ಭಾಷೆಲಾತೊ. ಭಾಷೆ ಜನಕುಲೆನ ನಡುಟು ಅಕ್‌ಲೆನ ನಾಲಗೆದ ಮಿತ್ತ್ ಬಳಕೆಡ್ ಇತ್ತ್ಂಡನೆ ಅವು ಜೀವಂತ ಭಾಷೆ ಆಪುಂಡು. ಆಂಡ ಕೆಲವು ಭಾಷೆಲು ಕಾಲಾಂತರೊಡು ಕಾರಣಾಂತರೊಡು ಅಳಿದ್ ಪೋಪ ಅವು. ಮೃತ ಭಾಷೆಲಾಪಾ.

ಭಾಷೆದ ದೃಶ್ಯ ಮಾಧ್ಯಮನೇ ಬರಹ ಭಾಷೆನ್ ಪತ್ತ್‌ದೀವೆರೆ ನರಮಾನಿ ಮಾಲ್ತಿನ ಪ್ರಯತ್ನನೆ ಬರಹ ಅತ್ತ್‌ಡ ಲಿಪಿ. ನಮ್ಮ ವಿಚಾರೊಲೆನ್ ಅನುಭವಲೆನ್ ಬರವುದ ಮೂಲಕ ಚಿರಕಾಲೊ ಬದ್ಕಾವೊಲಿ. ಭಾಷೆ ಸಾಮಾನ್ಯವಾದ್ ಲಿಪಿನ್ ಪಡೆವೊಂದಿಪ್ಪುಂಡ್. ಆಂಡ ಲಿಪಿನ್ ಪಡೆವೊಂದೇ ಉಪ್ಪೊಡು ಪನ್ಪಿನ ನಿಯಮ ದಾಲ ಇಜ್ಜಿ. ಇನಿ ಲಿಪಿ ಇಜ್ಜಾಂದಿ ಸುಮಾರು ಭಾಷೆಲು ನಮ್ಮೆದುರುಡೆ ಜೀವಂತವಾದುಪ್ಪುನೆನ್ ನಮ ತೂವೊಲಿ. ಸ್ವಂತ ಲಿಪಿ ಇಜ್ಜಾಂದಿ ಬಾಷೆಲು ಬೇತೆ ಭಾಷೆದ ಲಿಪಿಟ್ ಬರವಣಿಗೆ ರೂಪೊಡು ಬತ್ತಿನವು ಏತೊ ಉಲ್ಲೊ. ಭಾಷೆದ ಉಗಮ ಆಯಿ ಏತೊ ವರ್ಷದ ಬೊಕ್ಕ ಲಿಪಿ ಬಳಕೆಗೆ ಬತ್ತಿನವು. ಲಿಪಿತ ಉಪಯೋಗೊನ್ ತೆರಿಯೊಂದ್ ಆಯಿತ ನಿರ್ಮಾಣ ಕಾರ್ಯ ನಡತ್‌ಂಡ್. ಜ್ಞಾನದ ಪ್ರಸಾರೊಗ್ ಸಂಸ್ಕೃತಿದ ತೆರಿವುಗ್ ಸಾಹಿತ್ಯ ನಿರ್ಮಾಣೊಗು ಲಿಪಿ ಬಳಕೆ ಆಂಡ್. ಬೊಕ್ಕ ಭಾಷೆದ ಲೆಕೊನ ಲಿಪಿಲ ಸಂಸ್ಕಾರ ಹೊಂದುದು ಬತ್ತ್‌ಂಡ್.

ಸಂಸ್ಕೃತಿ ಪನ್ಪಿ ಪಾತೆರೊ ಬಾರಿ ಮಲ್ಲವು. ಆಯಿತ ಅರ್ಥೊಲಾ ಆತೇ ಅಸ್ಪಷ್ಟವಾಯಿನವು. ಒಂಜಿ ದೇಶದ ಸಂಸ್ಕೃತಿ ಒವು. ಒಂಜಿ ಜನಾಂಗದ ಸಂಸ್ಕೃತಿ ಒವುಂದ್ ವರ್ಗಿಕರಿಸದ್ ಪನ್ಪಿನವು ಭಾರೀ ಕಷ್ಟ. ಪ್ರತಿಯೊಂಜಿ ಜನಾಂಗೊಗು ತನ್ನನೇ ಆಯಿನ ಒಂಜೊಂಜಿ ಸಂಸ್ಕೃತಿ ಉಂಡೇ ಉಂಡು. ಅಂಚ ಸಂಸ್ಕೃತಿ ರೂಪಿಸಾವುನ

ಗೋತ್ರ ಹುಟ್ಟಿದ ರೀತಿ, ಕಾರಣವನ್ನು ತಿಳಿಸಿ ಎಲ್ಲಾ ಗೋತ್ರದವರು ಉತ್ತಮರೇ. ಯಾವ ಗೋತ್ರವು ಕೆಟ್ಟದಲ್ಲ. ಆದರೆ ಒಂದೊಂದು ಪಂಗಡಕ್ಕೆ ಒಂದೊಂದು ಸರಿ ಹೊಂದುವುದಿಲ್ಲ ಎಂಬ ಮಾತ್ರಕ್ಕೆ ಅಧಮರು ಎಂದರ್ಥವಲ್ಲ ಎಂಬುದನ್ನು ಸಮಾಜ ಬಂಧುಗಳಿಗೆಲ್ಲಾ ತಿಳಿಹೇಳಬೇಕು. ನಮ್ಮ ಗೌಡ ಸಮಾಜದ ಪ್ರಮುಖರು ದಯವಿಟ್ಟು ನನ್ನ ಕೆಲವೊಂದು ಬೇಡಿಕೆಯನ್ನು ಈಡೇರಿಸಲು ತೀವ್ರ ಗಮನಹರಿಸಬೇಕು.

1) ಮೊದಲನೆಯಾದಾಗಿ ಗೌಡ ಸಮಾಜದ ಬಾಂಧವರನ್ನೆಲ್ಲಾ ವಿಶ್ವಾಸಕ್ಕೆ ತೆಗೆದುಕೊಂಡು ಒಂದುಗೂಡಿಸುವ ಪ್ರಯತ್ನ ಮಾಡಬೇಕು.

2) ನಮ್ಮ ಸಮುದಾಯದ ಕಟ್ಟೆ ಮನೆ ಗೌಡರನ್ನು, ಗುತ್ತು ಗೌಡರನ್ನು, ಒತ್ತು ಗೌಡರನ್ನು ಹುಡುಕಿ ತಂದು ಒಂದೇ ವೇದಿಕೆಯಲ್ಲಿ ಸೇರಿಸಿ ಅವರವರ ಕರ್ತವ್ಯದ ಹಾಗೂ ಜವಾಬ್ದಾರಿ ಬಗ್ಗೆ ತಿಳಿ ಹೇಳಬೇಕು. ಯಾಕೆಂದರೆ ನಮ್ಮ ಸಮಾಜ ಕೆಲವೊಂದು ಕಟ್ಟುಪಾಡುಗಳು, ರೀತಿ ರಿವಾಜಿಗಳು, ನೀತಿ ನಿಯಮಗಳು ಕೆಲವೊಂದು ಊರ ಗೌಡರಿಗೆನೇ ಗೊತ್ತಿಲ್ಲದೇ ಇದ್ದು ಹಲವು ಕಾರ್ಯಕ್ರಮಗಳಲ್ಲಿ ತಪ್ಪು ತಿಳುವಳಿಕೆಯಿಂದ ಪೇಚಿಗೀಡಾಗುವ ಸಂಭವಗಳೇ ಹೆಚ್ಚು.

3) ಊರ ಗೌಡರನ್ನು ಯಾರೂ ಕೂಡಾ ಗೌರವಿಸುವುದಿಲ್ಲ. ಅವರ ಮಾತಿಗೆ ಬೆಲೆ ಕೊಡುವ ಜನ ನಮ್ಮ ಸಮಾಜದಲ್ಲಿ ದಿನೇ ದಿನೇ ಕಡಿಮೆಯಾಗುತ್ತಾ ಇದೆ. ಇದು ಕೇಂದ್ರದಿಂದ ಕಾನೂನು ಬದ್ಧವಾಗಿ ಜಾರಿಯಾಗಬೇಕು.

4) ಗೌಡ ಸಮಾಜದ ಕೆಲವು ಬಡ ಬಾಂಧವರನ್ನು ವಿಶ್ವಾಸಕ್ಕೆ ತೆಗೆದುಕೊಂಡು ಸರಕಾರದಿಂದ, ಸಂಘಸಂಸ್ಥೆಗಳಿಂದ ಸಿಗುವ ಸೌಲಭ್ಯವನ್ನು ಅವರಿಗೆ ಸಿಗುವಂತೆ ತೆರೆದ ಮನಸ್ಸಿನಿಂದ ಸಂಘದ ಮೂಲಕ ಹಾಗೂ ಮುಖಂಡರಿಂದ ಪ್ರಯತ್ನಗಳಾಗಬೇಕು. ಯಾಕೆಂದರೆ ನಮ್ಮ ಸಮಾಜದ ಎಷ್ಟೋ ಜನ ಸರಕಾರಿ ಇಲಾಖೆಗಳಲ್ಲಾಗಲೀ, ಸಂಸ್ಥೆಗಳಲ್ಲಾಗಲೀ ಪ್ರಮುಖ ಅಧಿಕಾರಿಗಳಾಗಿದ್ದಾರೆ. ಹಾಗೇನೇ ವಿಧಾನಸಭಾ ಸದಸ್ಯರಾಗಿ, ಸಚಿವರುಗಳಾಗಿ, ಮುಖ್ಯಮಂತ್ರಿಗಳಾಗಿ, ಲೋಕಸಭಾ ಸದಸ್ಯರಾಗಿ, ಇನ್ನೂ ಅನೇಕ ಉನ್ನತ ಮಟ್ಟದಲ್ಲಿದ್ದಾರೆ. ಅವರಲ್ಲಿ ನನ್ನ ಕಳಕಳಿಯ ವಿನಂತಿ.

5) ನಮ್ಮ ಗೌಡ ಸಮಾಜದಲ್ಲಿ ಎಷ್ಟೋ ಜನ ಅತೀ ಬಡವರಾಗಿದ್ದು, ಅವರಲ್ಲಿ ಹೆಣ್ಣು ಮಕ್ಕಳಿದ್ದರೆ, ಅವರನ್ನು ಮದುವೆ ಮಾಡಿಸುವಷ್ಟು ಸಾಮರ್ಥ್ಯ ಇಲ್ಲದವರೂ ಇದ್ದಾರೆ. ಸಣ್ಣ ಮಕ್ಕಳಿಗೆ ವಿದ್ಯಾಭ್ಯಾಸ ಕೊಡಿಸುವಷ್ಟು ಸಾಧ್ಯವಿಲ್ಲದ ಪರಿಸ್ಥಿತಿಯಲ್ಲಿದ್ದಾರೆ. ಇಂತಹ ಕುಟುಂಬಕ್ಕೆ ಒಂದಿಷ್ಟು ಧನ ಸಹಾಯ ಮಾಡಬೇಕು. ಅದಕ್ಕಾಗಿ 'ಭವಿಷ್ಯ ನಿಧಿ' ಸ್ಥಾಪನೆ ಮಾಡಬೇಕು. ಅಥವಾ 'ವಿವಾಹ ಯೋಜನೆ' ಎಂಬ ವೇದಿಕೆ ಮಾಡಿ ಸಾಮೂಹಿಕ ಮದುವೆ ನಡೆಸಬೇಕು.

ನಮ್ಮ ಸಮಾಜದ ಸಂಘಟನೆ ಬಲಿಷ್ಠವಾಗಬೇಕಾದರೆ, ಧ್ಯೇಯಗಳು ಈಡೇರಬೇಕಾದರೆ ನಮ್ಮ ಎಲ್ಲಾ ಪ್ರಯತ್ನಗಳು ಅರ್ಥಪೂರ್ಣವಾಗಿ ಫಲ ಕೊಡಬೇಕಾದರೆ ಇಂತಹ ಧ್ಯೇಯೋದ್ದೇಶಗಳು ಸಂಘದಿಂದ ನಡೆಯಬೇಕು. ಆಗ ಸಂಘವು ಬಲಿಷ್ಠವಾಗಿ ಎತ್ತರಕ್ಕೇರುವುದರಲ್ಲಿ ಸಂದೇಹವಿಲ್ಲ. ನಮ್ಮ ಗೌಡ ಸಮಾಜಕ್ಕೆ ಆದಿಚುಂಚನಗಿರಿ ಮಹಾಸಂಸ್ಥಾನದ ಜಗದ್ಗುರು ಶ್ರೀ ಶ್ರೀ ಶ್ರೀ ಬಾಲಗಂಗಾಧರನಾಥ ಸ್ವಾಮೀಜಿಯವರ ಶುಭಾಶೀರ್ವಾದದಿಂದ ನಮ್ಮಲ್ಲಿ ಅನೇಕ ಮಹಾನಾಯಕರಿದ್ದಾರೆ. ನಮ್ಮ ಸಮಾಜಕ್ಕೆ ಏನೂ ಕೊರತೆಯಿಲ್ಲ. ಹಾಗಿರಲು ನನ್ನ ಈ ಮೇಲಿನ ಸಣ್ಣ ಕೇಳಿಕೆಗಳನ್ನು ಈಡೇರಿಸಲು ಅಲ್ಪ ಕಷ್ಟವೂ ಆಗದು. ಕತ್ತಲೆಯಲ್ಲಿದ್ದ ಕಡು ಬಡವರಿಗೆ ದೀಪದ ಬೆಳಕಾದರೆ ಇವರೆಲ್ಲರ ಘನಸ್ಥಿಕೆ ಉತ್ತುಂಗಕ್ಕೇರುತ್ತದೆ. ನಿಮ್ಮೆಲ್ಲರ ವಿಶಾಲ ಹೃದಯ ಈ ನನ್ನ ಬೇಡಿಕೆಗೆ ಸ್ಪಂದಿಸುತ್ತದೆ ಎಂದು ನನ್ನ ಹೃದಯ ನುಡಿಯುತ್ತಿದೆ.

*ನುಡಿವಣಿಗಳು*

✍ ಕೊಳಂಬೆ ಪುಟ್ಟಣ್ಣ ಗೌಡ

- ಏನೂ ಕಾಣದಿರುವ ಕಣ್ಣಿಗೆ ಕನ್ನಡಿ ಕೊಡಬಾರದು. ಸ್ವಲ್ಪ ಕಾಣುವ ಕಣ್ಣಿಗೆ ಕನ್ನಡಿ ಫಲಕಾರಿ; ಹಾಗೆಯೇ ದುಡಿಯದ ಸೋಮಾರಿಗೆ ಸಹಾಯ ಮಾಡುವುದು ನಿಷ್ಫಲ. ದುಡಿದು ಸೋತವನಿಗೆ ನಮ್ಮಿಂದಾದ ಸಹಾಯವನ್ನು ಮಾಡಲೇಬೇಕು.

- ಓದಿದ ಗ್ರಂಥಗಳ ಸಂಖ್ಯೆ ಬೆಟ್ಟದಷ್ಟು ಬೆಳೆದಿದ್ದರೂ ಬೀಜವನ್ನು ಬಿತ್ತದೆ ಮನೆಯಲ್ಲೇ ತುಂಬಿಸಿಟ್ಟಂತೆ ನಿಷ್ಫಲವು. ಕಾರ್ಯದಲ್ಲಿ ಪ್ರಯೋಗ ಮಾಡಿ ಫಲವನ್ನು ಪಡೆಯಲು ಗ್ರಂಥಾನುಭವಗಳು ಬೇಕಾಗಿರುವುದರಿಂದ ಓದಿ ಪಡೆದ ತಿಳಿವು ನಮ್ಮ ಜೀವನಕ್ಕೆ ಹೊಂದಿಕೊಂಡಾಗ ಅದರಿಂದ ಸಮೃದ್ಧ ಫಲ ದೊರೆಯುವುದು.

# ರಾಜಶ್ರೇಷ್ಠ ರಘು

✍ ಕೆ. ಸಿ. ಮುತ್ತಪ್ಪಗೌಡ

ಭಾರತದಲ್ಲಿ ಸುಪ್ರಸಿದ್ಧವಾದ ಸೂರ್ಯವಂಶಕ್ಕೆ ರಘುವಂಶವೆಂಬ ಅಭಿದಾನವಿದೆ. ರಘುಮಹಾರಾಜನ ಉದಾರ ಚರಿತೆಯೇ ಇದಕ್ಕೆ ಕಾರಣ. ತಂದೆ ದಿಲೀಪನಿಂದ ರಾಜ್ಯಾಭಿಷಿಕ್ತನಾದ ರಘುವು ಚಂದ್ರನಂತೆ ಪ್ರಹ್ಲಾದಕನಾಗಿಯೂ ಸೂರ್ಯನಂತೆ ಪ್ರತಾಪಿಯಾಗಿಯೂ "ರಾಜಾ ಪ್ರಕೃತಿರಂಜನಾತ್" ಎಂಬುದಕ್ಕೆ ಅನ್ವರ್ಥಕನಾಗಿದ್ದನಲ್ಲದೆ ದಿಗ್ವಿಜಯಗೈದು, ಸಮಗ್ರದೇಶವನ್ನು ಗೆದ್ದು ತನ್ನ ಪದವಿಯನ್ನು ಭದ್ರಗೊಳಿಸಿದನು. ಗೆದ್ದ ರಾಜ್ಯಗಳಲ್ಲಿ ಅಲ್ಲಿನ ರಾಜರನ್ನೇ ಸ್ಥಾಪಿಸಿ ತಾನು ರಾಜ್ಯಲೋಭಿಯಲ್ಲವೆಂದು ತೋರಿಸಿಕೊಟ್ಟನು. ಹೀಗೆ ಕ್ರೋಢೀಕರಿಸಿದ ಸರ್ವಸ್ವವನ್ನೂ ದಕ್ಷಿಣೆಯಾಗಿ ಕೊಡುವ 'ವಿಶ್ವಜಿತ್' ಎಂಬ ಯಾಗವನ್ನಾಚರಿಸಿ ಸಂಪತ್ತೆಲವನ್ನೂ ದಾನ ಮಾಡಿ ಅಕಿಂಚನನಾದನು. ಯಾಕೆಂದರೆ [ಆದಾನಂ ಹಿ ವಿಸರ್ಗಾಯ ಸತಾಂ ವಾರಿಮುಚಾಂ ಇವ] ಮೇಘಗಳು ಸಂಗ್ರಹಿಸಿದ ನೀರನ್ನು ಮತ್ತೆ ಮಳೆಗರೆವಂತೆ ಸತ್ಪುರುಷರ ಸಂಗ್ರಹವೂ ದಾನಕ್ಕಾಗಿ ಉಪಯುಕ್ತವಾಗುತ್ತದೆಯಷ್ಟೆ!

ಗುರು ವರತಂತುವಿನಿಂದ ಪಡೆದ ಶಾಸ್ತ್ರ ಜ್ಞಾನದಿಂದ ತೇಜಸ್ವಿಯಾದ ಕೌತ್ಸನೆಂಬವನು ಯಶಸ್ಸಿನಿಂದ ಪ್ರಕಾಸಿಸುತ್ತಿರುವ ರಘುವಿನ ಬಳಿಗೆ, ತಾನು ಗುರುವಿಗೆ ದಕ್ಷಿಣೆಯಾಗಿ ನೀಡಬೇಕಾದ ಹದಿನಾಲ್ಕು ಕೋಟಿ ಸ್ವರ್ಣನಾಣ್ಯಾಯಗಳನ್ನು ಈ ಕ್ಷಿತೀಶನಿಂದ ಪಡೆಯಬಹುದೆಂಬ ನಿರೀಕ್ಷೆಯಿಂದ ಬಂದನು. ಅನರ್ಘ್ಯಶೀಲನಾದ ರಾಜನು [ವೀತ ಹಿರಣ್ಮಯತ್ವಾತ್ ಮೃಣ್ಮಯೇ ಪಾತ್ರೇ ಅರ್ಘ್ಯಂ ನಿಧಾಯ] ಸಂಪತ್ತೆಲ್ಲವನ್ನೂ ದಾನ ಮಾಡಿದ್ದುದರಿಂದ ಮಣ್ಣಿನ ಪಾತ್ರೆಯಲ್ಲಿ ಅರ್ಘ್ಯವನ್ನಿತ್ತು ಸ್ವಾಗತಿಸಿದನು. ಅತಿಥಿಯನ್ನು ಸತ್ಕರಿಸಿ ಯೋಗಕ್ಷೇಮವನ್ನು ವಿಚಾರಿಸಿ ಆಗಮನದ ಉದ್ದೇಶವನ್ನು ತಿಳಿಯಬಯಸಿದನು. ಕುಶಾಗ್ರಬುದ್ಧಿಯ ಕೌತ್ಸನಿಗೆ ಸಮಯ ಮೀರಿ ತಾನು ಬಂದುದಾಯ್ತೆಂದು ಅರ್ಘ್ಯ ಪಾತ್ರೆಯಿಂದಲೇ ಅರಿವಾಯ್ತು. ಆದರೆ ವರ್ಣಾಶ್ರಮ ಧರ್ಮಗಳ ರಕ್ಷಕನಾದ ರಾಜನ ಒತ್ತಾಯದಿಂದಾಗಿ ತನ್ನ ಅಗತ್ಯವನ್ನು ತಿಳಿಸಿದನು. ಕೌತ್ಸನ ಕೋರಿಕೆಯನ್ನು ಪೂರೈಸಲು ಮತ್ತೆ ಕೋಶಭರಣಕ್ಕಾಗಿ ಪ್ರಜಾಪೀಡಕನಾಗದೆ ಸಂಪತ್ತಿನ ಪ್ರಭುವಾದ ಕುಬೇರನನ್ನೇ ಜಯಿಸಲು ನಿರ್ಧರಿಸಿದನು.

ವಿಶೇಷವೆಂದರೆ ಅದೇ ರಾತ್ರಿ ರಾಜಕೋಶಾಗಾರದಲ್ಲಿ ಹಿರಣ್ಮಯವೃಷ್ಟಿಯಾಯ್ತೆಂದು ಅಧಿಕಾರಿಗಳಿಂದ ತಿಳಿದು ಅದೆಲ್ಲವನ್ನೂ ವಿದ್ಯಾಪಾರಂಗತನಾದ ಕೌತ್ಸನಿಗೆ ನೀಡಿ ಅರ್ಥನೆಗಿಂತಲೂ ಅಧಿಕದಾನಿಯಾಗಿ ಮೆರೆದನು. ನ್ಯಾಯಮಾರ್ಗದಿಂದ ಅರ್ಥವನ್ನು ಆರ್ಜಿಸಿ, ವರ್ಧಿಸಿ, ಪಾಲಿಸಿ, ಸತ್ಪಾತ್ರಕ್ಕೆ ದಾನನೀಡುವ ಪ್ರಜಾಪಾಲಕನ ಪ್ರಭಾವಕ್ಕೆ ಭೂಮಿ ಮಾತ್ರವಲ್ಲ ಸ್ವರ್ಗವು ಕೂಡಾ ಕಾಮಧುಕ್ ಆಗುವುದರಲ್ಲಿ ಆಶ್ಚರ್ಯವೇನಿದೆ?

ಈಗ ಭಾರತದಲ್ಲಿ ರಾಜರಿಲ್ಲ; ಆದರೆ ಪ್ರಜಾ ಪ್ರತಿನಿಧಿಗಳಿದ್ದಾರೆ. ರಘುವಿನ ಪರಾಕ್ರಮ, ಪ್ರಜಾವಾತ್ಸಲ್ಯ, ಕರ್ತವ್ಯ ನಿಷ್ಠೆ, ಜ್ಞಾನಿಗಳ ಬಗ್ಗೆ ಗೌರವ, ಅತಿಥಿಗಳ ಬಗ್ಗೆ ಆದರ, ಆರ್ಥ್ಯರ ಮೇಲೆ ಪ್ರಭಾವ, ಸಂಪತ್ತಿನ ಮೇಲೆ ನಿಸ್ಪೃಹೆ ಮುಂತಾದ ಗುಣಗಳನ್ನು ಇವರಲ್ಲೂ ನಿರೀಕ್ಷಿಸೋಣ.

**(ಆಕರ - ಕಾಲಿದಾಸಕೃತ ರಘುವಂಶ)**

## ಮಗು

ನಾನೀಗ ದೊಡ್ಡವಳಾದರೂ ಮನಸ್ಸು ಕೆಲವೊಮ್ಮೆ ಮಗುವೆ
ಮಕ್ಕಳ ಕಂಡಾಗ ನಾನಾಗ ಬಯಸುವೆ ಅವರಂತೆ
ಆಹಾ! ಮುಗ್ಧತೆಯ ಮುದ್ದುಗಳಲ್ಲವೇ, ಅವರು
ಅವರಂತೆ ನಾನಾಗುವುದು ಎಂತು ಮುಗ್ಧತೆಯಲ್ಲಿ

ನಾನವರಂತೆ ಆಗದಿದ್ದರೂ, ಅವರೊಡನೆ ಆಡುವೆ
ಆಡಿ-ಬೀಳಿಸಿ ನೋಯಿಸಿ ಅಳಿಸುವೆ ಮತ್ಸರದಿ
ಮಗದೊಮ್ಮೆ ನಾನೇ ಬೀಳುತ್ತೇನೆ, ಬಿದ್ದು ಅಳುತ್ತೇನೆ
ನೋವಿನಲ್ಲಿ ಅಲ್ಲೇ ಮಗುವಿನ ಭಾವ ಭಾವನೆಯಲ್ಲಿ.

ನನ್ನಲ್ಲಿಯೂ ಸ್ವಾರ್ಥದ ಬುದ್ಧಿ
ಮನದ ನೋವ ಕಳೆವ ಹಾದಿ
ಮಗುವಿನ ಮನಸದೋ ತೆರೆದ ಪುಟ
ನನ್ನ ಮನಸ್ಸದೋ ಮುಚ್ಚಿದ ಕವಾಟ

✍ ವಿಜಯಲಕ್ಷ್ಮಿ ಪಿ., ಕರಂಗಲ್ಲು

# ವಿದ್ವಾನ್ ಕೊಳಂಬೆ ಪುಟ್ಟಣ್ಣ ಗೌಡ

✍ ಕುತ್ಯಾಳ ನಾಗಪ್ಪ ಗೌಡ (ಕಿರಣ)



ಗತ ಕಾಲದ ಆಕರ್ಷಣೆ ನನ್ನನ್ನೂ ಬಿಟ್ಟಿಲ್ಲ. ನೆನಪು ಮಾಡಿಕೊಳ್ಳುವುದು, ಅವುಗಳನ್ನು ಇತರರೊಡನೆ ಹಂಚಿಕೊಳ್ಳುವುದು ಹೊಸ ವಿಧಾನವಲ್ಲ. ಈ ಕ್ರಮ ಹಳತಾದುದೂ ಇಲ್ಲ. ಹಳತು ವರ್ತಮಾನದೊಡನೆ ಸೇರಿಕೊಂಡು ಮುಂದೆ ಮುಂದೆ ಸಾಗುತ್ತಿರುವುದು ಸಹಜ ರೀತಿ. ಕೊಳಂಬೆ ಪುಟ್ಟಣ್ಣ ಗೌಡರು ತಾಳವ ಪರಿಜ್ಞಾನವಿದ್ದ ವಿದ್ವಾಂಸ. ಅವರನ್ನು ನೆನಪು ಮಾಡಿಕೊಳ್ಳುವುದಕ್ಕೆ ಕಾರಣಗಳಿವೆ.

ನಾನು ಸುಳ್ಯದ ಹೈಸ್ಕೂಲಿನ ಫಸ್ಟ್ ಫಾರ್ಮಿಗೆ (ಆರನೆಯ ತರಗತಿ) ಸೇರಿದ್ದೆ. ಅಂಗಿ, ಚಡ್ಡಿ, ಚೀಲ, ಪುಸ್ತಕ, ಎಲ್ಲವೂ ಹೊಸತೆ! ಇಷ್ಟೊಂದು ಹೊಸ ವಸ್ತುಗಳು ಏಕ ಕಾಲದಲ್ಲಿ ದೊರೆತದ್ದು ಅದೇ ಮೊದಲು. ಬರಿಗಾಲಿನ ವಿದ್ಯಾರ್ಥಿಗೆ ಒಂದು ಜತೆ ಚಪ್ಪಲಿ ಬೇಕಿತ್ತು. ಕೇಳುವ ಧೈರ್ಯ ಇರಲಿಲ್ಲ. ನನ್ನ ತಂದೆ ಖಾಲಿ ಕಿಸೆಯ ಬಡವನೆಂದು ನನಗೆ ಗೊತ್ತಿತ್ತು. ಶಾಲೆಗೆ ಸೇರಿದ ಕೆಲವೇ ತಿಂಗಳುಗಳ ನಂತರ ನಮ್ಮ ಶಾಲೆಗೆ ಆಗಿನ ಮದ್ರಾಸು ಸರಕಾರದ ಕೃಷಿ ಮಂತ್ರಿಗಳು ಭೇಟಿ ನೀಡಿದ್ದರು. ಆಗಿನ ಎಂ.ಎಲ್.ಎ. ಕೂಜುಗೋಡು ವೆಂಕಟರಮಣ ಗೌಡರು ಜೊತೆಗಿದ್ದರು. ವಿದ್ಯುದ್ದೀಪ, ಮೈಕ್, ವಿಡಿಯೋಗಳಿಲ್ಲದ ದೊಡ್ಡ ಸಭೆ ಅದಾಗಿತ್ತು. ಕನ್ನಡ ಪಂಡಿತರಾಗಿದ್ದ ಕೊಳಂಬೆ ಪುಟ್ಟಣ್ಣ ಗೌಡರಿಂದ ಸ್ವಾಗತವಿತ್ತು. ಅದು ಭಾಷಣವಾಗಿರಲಿಲ್ಲ. ಮಂತ್ರಿ ಮಹೋದಯರನ್ನು ಸ್ವಾಗತಿಸಲು ಪ್ರೌಢ ಶೈಲಿಯ ಕಾವ್ಯವನ್ನು ರಚಿಸಿ ಅದನ್ನು ಸಭೆಯ ಮುಂದೆ ವಾಚಿಸಿದರು. ಅವರಿವರ ಮೂಲಕ ಕೊಳಂಬೆಯವರು ಕವಿಯೆಂದು ತಿಳಿದಿದ್ದೆ. ಇವರ ಸ್ವರಚಿತ ಕಾವ್ಯ ವಾಚನವನ್ನು ಕೇಳಿದ ಮೇಲೆ ಇವರ ಕುರಿತು ಗೌರವ ಹೆಚ್ಚಾಯಿತು.

ಇವರ ಸುಪುತ್ರ ಚಿದಾನಂದ ಮತ್ತು ನಾನು ಸ್ನೇಹಿತರಾದೆವು. ಚಂದಾಹಣ ಕಳುಹಿಸಿ ಪತ್ರಿಕೆಗಳನ್ನು ತರಿಸಿ ಓದತೊಡಗಿದೆವು. ನಾವು ಪತ್ರಿಕೆಗಳಿಗೆ ಬರೆಯುತ್ತಿದ್ದೆವು. ನಮ್ಮ ಬರಹಗಳು ಪ್ರಕಟವಾದಾಗ ಹಿಗ್ಗುತ್ತಿದ್ದೆವು. ಆಟ ಪಾಟಗಳಲ್ಲಿ ಹತ್ತಿರ ಹತ್ತಿರ ಇರುತ್ತಿದ್ದೆವು. 'ಪ್ರಬುದ್ಧ ಕರ್ನಾಟಕ'ದಲ್ಲಿ ಕುವೆಂಪು ಅವರ ಆಕರ್ಷಕ ಭಾವಚಿತ್ರದೊಂದಿಗೆ ಪ್ರಕಟವಾಗುತ್ತಿದ್ದ ಕವಿತೆಗಳನ್ನು ಓದುತ್ತಿದ್ದೆವು. ನಾವು ಕುವೆಂಪು ಅವರ ಅಭಿಮಾನಿಗಳಾಗಿದ್ದೆವು. (ಮುಂದೆ ಚಿದಾನಂದರು ಪ್ರೊಫೆಸರ್ ಆದರು. ರಾಷ್ಟ್ರಕವಿ ಕುವೆಂಪು ಅವರ ಅಳಿಯನಾದರು. ಈಗ ಕುವೆಂಪು ವಿಶ್ವವಿದ್ಯಾನಿಲಯದ ಕುಲಪತಿಗಳಾಗಿದ್ದಾರೆ.) ಕೊಳಂಬೆಯವರು 'ಕಾಲೂರು ಚೆಲುವೆ' ಕಾವ್ಯವನ್ನು ಬರೆಯುತ್ತಿದ್ದ ವಿಚಾರ ಚಿದಾನಂದರ ಮೂಲಕ ತಿಳಿಯುತ್ತಿತ್ತು. ಕನ್ನಡ ಪಂಡಿತರ ಕಾವ್ಯ ರಚನೆ ನನ್ನ ಮಟ್ಟಿಗೆ ಬಹಳ ಮಹತ್ವದ ವಿಷಯವಾಗಿತ್ತು. ಹಸ್ತ ಪ್ರತಿಯನ್ನು ನೋಡುವ ಕುತೂಹಲವಿತ್ತು. ಪಂಡಿತರಿಲ್ಲದ ಹೊತ್ತಿನಲ್ಲಿ ಅವರ ಮನೆಯಲ್ಲಿ ಹಸ್ತ ಪ್ರತಿಯನ್ನು ತೋರಿಸುವ ವ್ಯವಸ್ಥೆಯನ್ನು ಸ್ವತಃ ಚಿದಾನಂದರೇ ಮಾಡಿದ್ದರು. ಹಸ್ತ ಪ್ರತಿಯನ್ನು ನೋಡುತ್ತಿರುವಾಗಲೇ ಪಂಡಿತರು ಮನೆಯೊಳಗೆ ಕಾಲಿಟ್ಟರು! ನಾವು ತಪ್ಪು ಮಾಡಿದ್ದೆವು. ಅನುಮತಿ ಪಡೆದಿರಲಿಲ್ಲ. ಆಶ್ಚರ್ಯವೆಂದರೆ, ಪಂಡಿತರು ಏನೂ ಹೇಳಲಿಲ್ಲ. ನಾನು ಜಾಗ ಖಾಲಿ ಮಾಡಿದೆ. ಮುಂದೇನಾಯಿತೋ ತಿಳಿಯಲಿಲ್ಲ.

'ಕಾಲೂರ ಚೆಲುವೆ' ಪ್ರಕಟವಾಯಿತು. ಆಗ ನನ್ನ ಕಾವ್ಯದ ಏರು ಜವ್ವನದ ಕಾಲ. ಆಗಲೇ ಅಡಿಗರ 'ಭೂಮಿಗೀತ' ಪ್ರಕಟವಾಗಿತ್ತು. ಅಡಿಗರ 'ಸಾಕ್ಷಿ' ಪತ್ರಿಕೆ ಪ್ರತಿಭಾವಂತರಿಗೆ ವೇದಿಕೆಯನ್ನೊದಗಿಸಿತ್ತು. ಹಳೆಯ ನಮೂನೆಯ ಕಾವ್ಯ ತಿರಸ್ಕಾರಯೋಗ್ಯ ಎಂಬ ಭಾವನೆ ಬೆಳೆಯುತ್ತಿತ್ತು. ಆದರೆ 'ಕಾಲೂರ ಚೆಲುವೆ' ಹಳೆಯದಾಗಿರದೆ ವಿಭಿನ್ನವಾಗತ್ತು. ವಿಶಿಷ್ಟ ಪ್ರಯೋಗವಾಗಿತ್ತು. ಭಾಷೆ ಮತ್ತು ವಸ್ತು ವಿಶಿಷ್ಟವಾಗಿತ್ತು. ತದ್ಭವಗಳನ್ನೂ ದೂರವಿರಿಸಿದ ಅಚ್ಚಗನ್ನಡ ಈ ಕಾವ್ಯದ ಭಾಷೆ. ಪೌರಾಣಿಕ ಕಥೆಯ ಬದಲು ನಿಸರ್ಗದ ನಡುವೆ ಅದರಷ್ಟೇ ಸಹಜವಾಗಿ ಬದುಕುತ್ತಿದ್ದ ಮುಗ್ಧ ಜೀವಿಗಳ ಮೇಲೆ ಆಧುನಿಕತೆಯ ವಿಕಾರ ನೀಡಿದ ಪ್ರಹಾರವೇ ಈ ಕಾವ್ಯದ ವಸ್ತು. ಸಂಸ್ಕೃತದ ದಾಳಿಯನ್ನು ಎದುರಿಸಲು ಕೊಳಂಬೆಯವರು ಬಳಸಿದ್ದು ತನ್ನ ಅಚ್ಚಗನ್ನಡದ ಪಾಂಡಿತ್ಯವನ್ನು. ಪರಕೀಯ ದಾಳಿಗಳನ್ನು ಎದುರಿಸಲು ಗಾಂಧಿ, ಖಾದಿ, ಚರಕ, ಪೋಸ್ಟ್ ಕಾರ್ಡನ್ನು ಬಳಸಿದರು. ಪೋಸ್ಟ್‌ಕಾರ್ಡು ಅಗ್ಗವಾಗಿರುವುದಲ್ಲದೆ ಅದರಲ್ಲಿರುವ ಸಂದೇಶದಲ್ಲಿ ಗುಟ್ಟೇನಿಲ್ಲ. ಮುಚ್ಚು ಮರೆಯಿಲ್ಲದ ಗಾಂಧಿಯ ವ್ಯಕ್ತಿತ್ವದಿಂದ ಪ್ರಭಾವಿತರಾಗಿದ್ದ ಕೊಳಂಬೆಯವರು ದೇಸಿಯನ್ನು ತನ್ನ ಸಲಕರಣೆಯನ್ನಾಗಿ ಬಳಸಿಕೊಂಡ ಪ್ರಯೋಗಶೀಲತೆಯನ್ನು ಸಾಂಸ್ಕೃತಿಕ ವಲಯದ ಚಿಂತಕರು ಗಮನಿಸಬೇಕು.

ಕೊಳಂಬೆಯವರು ದೇಸಿ ಪದಗಳನ್ನು ಉತ್ಪಾದಿಸುವ ಒಂದು ಟಂಕಸಾಲೆಯಂತಿದ್ದರು. 'ಅರ್ಜಿ' ಪದ ಕೇವಲ ಬಳಕೆಯ ಪದವಲ್ಲ; ಹೊರತು ಅದರ ಜತೆಗೆ ಭಾವನೆ ಹೆಚ್ಚು ಹಾಕುವುದಿಲ್ಲ. ಇದಕ್ಕೆ ಪರ್ಯಾಯವಾಗಿ 'ಮೊರೆಯೋಲೆ' ಎಂಬ ಪದವನ್ನು ಇವರು ಟಂಕಿಸಿದರು.

ತೊಂದರೆಯಾಗಿದೆ. ಸಹಾಯ ಬೇಕೆಂದು ಸಂಬಂಧಪಟ್ಟವರಿಗೆ ಮೊರೆಯಿಡಲಾಗುತ್ತದೆ. ಈ ಮೊರೆಯಿಡುವಿಕೆಗೆ 'ಮೊರೆಯೋಲೆಯೇ' ಸಮರ್ಪಕವಾದ ಪದ! ಸ್ವರ್ಗ ನರಕಗಳನ್ನು ನಾವು ವಾಸಿಸುವ ನೆಲದಿಂದ ಆಚೆ ಈಚೆ ಗುರುತಿಸಲು ಇಷ್ಟಪಡದ ಕೊಳಂಬೆಯವರು ಸ್ವರ್ಗವನ್ನು 'ಮೇಲ್ನೆಲ' ಮತ್ತು ನರಕವನ್ನು 'ಕೀಳ್ನೆಲ' ಎಂದು ಕರೆದರು. ಕೊಳಂಬೆಯವರ ಪಾಂಡಿತ್ಯ, ಪ್ರತಿಭೆ ಮತ್ತು ಔಚಿತ್ಯ ಪ್ರಜ್ಞೆಗೆ ಒಂದು ಚಿಕ್ಕ ಉದಾಹರಣೆ ಇದು.

ಸ್ವಾತಂತ್ರ್ಯ ಪೂರ್ವ ಮತ್ತು ಸ್ವಾತಂತ್ರ್ಯೋತ್ತರದ ದಿನಗಳಲ್ಲಿ ಕಾವ್ಯ ಸಂಬಂಧಿತ ಕಾಯಕದಲ್ಲಿ ತನ್ನನ್ನು ತೊಡಗಿಸಿಕೊಂಡಿದ್ದ ಕೊಳಂಬೆಯವರು ಅಚ್ಚಗನ್ನಡವನ್ನೇ ತನ್ನ ಆಸಕ್ತಿಯ ನೆಲೆಯನ್ನಾಗಿಸಿಕೊಂಡಿದ್ದರು. ಅಚ್ಚಗನ್ನಡದಲ್ಲಿ ಒಂದು ಸಾವಿರದಷ್ಟು ಮುಕ್ತಕಗಳನ್ನು ಬರೆದರು. 'ನುಡಿಮಣಿ'ಗಳೆಂದು ಪ್ರಕಟವಾಗಿರುವ ಈ ಮುಕ್ತಕಗಳು ಜೀವನವನ್ನು ವ್ಯಾಖ್ಯಾನಿಸಲು ನಡೆಸಿದ ಪ್ರಯತ್ನಗಳಾಗಿವೆ. ಈ ಕುರಿತು ರಾಷ್ಟ್ರಕವಿ ಕುವೆಂಪು ಹೇಳಿರುವುದು ಹೀಗೆ. ಸಮಸ್ತ ಜೀವನವೂ ಒಂದು ನಿರಂತರ ಯೋಗ. ಅದನ್ನು ಅರಿತಿರಲಿ ಬಿಡಲಿ, ಜೀವಿಗಳೆಲ್ಲ ಅದಕ್ಕೆ ಅನುಗುಣವಾಗಿ ಜೀವಿಸುತ್ತವೆ. ಆ ಪರಮ ತತ್ವದ ಕಡೆಗೆ ನಡೆಯುತ್ತವೆ. ಈ ರಹಸ್ಯವನ್ನು ಅರಿತರೆ ಮಾನವನ ಬಾಳು ಅರ್ಥಪೂರ್ಣವಾಗುತ್ತದೆ. ಇದೇ ಪ್ರಧಾನವಾಗಿ ಶ್ರೀ ಕೊಳಂಬೆ ಪುಟ್ಟಣ್ಣ ಗೌಡರು ತಮ್ಮ ಸಾವಿರ ಮುಕ್ತಕಗಳಲ್ಲಿ ರಸಾತ್ಮಕವಾಗಿ ಪ್ರತಿಪಾದಿಸಿರುವ ಪ್ರಧಾನ ತತ್ವ.

ಕೊಳಂಬೆಯವರ ಕನ್ನಡ ಪ್ರೀತಿ ಪ್ರಾಮಾಣಿಕವಾದುದು. ಅದು ತೋರಿಕೆಯ ಹೋರಾಟವಾಗಿರಲಿಲ್ಲ. ಪ್ರಶಸ್ತಿ, ಪದವಿ ಪುರಸ್ಕಾರಗಳಿಗಾಗಿ ಪರದಾಡಿದವರಲ್ಲ. ಅಚ್ಚಗನ್ನಡ 'ನುಡಿಕೋಶ'ವನ್ನು ರಚಿಸಿ ಸಾರಸ್ವತ ಲೋಕಕ್ಕೆ ಸದ್ದಿಲ್ಲದೆ ಒಪ್ಪಿಸಿದ್ದಾರೆ. ಸಂತೋಷದ ವಿಷಯವೇನೆಂದರೆ, ಈ ಶಬ್ದಕೋಶದ ಪ್ರಥಮ ಆವೃತ್ತಿಯ ಪ್ರತಿಗಳೆಲ್ಲಾ ಮಾರಾಟವಾಗಿ ದ್ವಿತೀಯ ಮುದ್ರಣದ ಪ್ರತಿಗಳು ಸದ್ಯದಲ್ಲೇ ಮಾರುಕಟ್ಟೆಗೆ ಬರಲಿವೆ. ಕನ್ನಡ ನಾಡಿನ ಜ್ಞಾನ ಪಕ್ಷಪಾತಿಗಳು ನಿಧಾನವಾಗಿಯಾದರೂ ಕೊಳಂಬೆಯವರನ್ನು ಗಮನಿಸುತ್ತಿದ್ದಾರೆನ್ನುವುದು ಸಮಾಧಾನದ ಸಂಗತಿ.

ಕೊಳಂಬೆಯವರು ಎತ್ತರದ ವ್ಯಕ್ತಿ. ಯೋಚಿಸುತ್ತ ನಡೆಯುತ್ತಿದ್ದರು. ಉನ್ನತ ಶಿಕ್ಷಣದಿಂದ ವಂಚಿತರಾಗಿದ್ದ ಇವರು ಸ್ವಪ್ರಯತ್ನದಿಂದ ವಿದ್ವಾನ್ ಪರೀಕ್ಷೆ ಪಾಸು ಮಾಡಿ ಹೈಸ್ಕೂಲಿನ ಕನ್ನಡ ಪಂಡಿತರಾದರು. ಸಂಸ್ಕೃತದ ಪದಪುಂಜಗಳನ್ನು ಬಳಸಿ ಪಾಂಡಿತ್ಯ ಪ್ರದರ್ಶನ ಮಾಡಬಹುದಿತ್ತು. ಸಂಸ್ಕೃತವು ಕೊಳಂಬೆಯವರಿಗೆ ಅಪರಿಚಿತ ಭಾಷೆಯಾಗಿರಲಿಲ್ಲ. ಅಮರ ಕೋಶದಿಂದ ಶ್ಲೋಕಗಳನ್ನು ಉದ್ಧರಿಸಿ ಪದಗಳಿಗೆ ಅರ್ಥ ಹೇಳಬಲ್ಲವರಾಗಿದ್ದರು. ಆದರೆ ಅವರ ಒಲವು ಪರಿಸರದ ಬದುಕಿಗೆ ಸ್ಪಂದಿಸಬಲ್ಲ ಕನ್ನಡದ ಕಡೆಗಿತ್ತು. ಕನ್ನಡವು ಸಂಸ್ಕೃತದ ವಿರೋಧಿಯಲ್ಲ ಆದರೆ ಕನ್ನಡವು ಸಂಸ್ಕೃತವನ್ನೇ ಅವಲಂಬಿಸಬೇಕಾದ ಅನಿವಾರ್ಯತೆಯೇನೂ ಇಲ್ಲ. ಯಾವ ಭಾಷೆಗೂ ಸರಿಸಾಟಿಯಾಗಿ ಮೆರೆಯುವಷ್ಟು ಪದ ಸಂಪತ್ತು ದೇಸಿ ಕನ್ನಡದಲ್ಲಿದೆಯೆಂದು ತೋರಿಸುವುದು ಕೊಳಂಬೆಯವರ ಆದರ್ಶವಾಗಿತ್ತು. ಸ್ವಂತ ಶಕ್ತಿಯಿಂದ ಅವರೊಬ್ಬರೇ ಅದನ್ನು ಮಾಡಿ ತೋರಿಸಿದರು.

ಕೊಳಂಬೆಯವರು ಬಿಳಿಯುಡುಗೆಯ ಶುಭ್ರ ಬಣ್ಣದ ವ್ಯಕ್ತಿ. ಪಂಡಿತರಾದರೂ ಹಾಸ್ಯ ಪ್ರಜ್ಞೆಯನ್ನು ಮೈಗೂಡಿಸಿಕೊಂಡಿದ್ದರು. ಸರಳ ಜೀವನಕ್ಕೆ ಮಾದರಿಯೂ ಆಗಿದ್ದರು. ಜೀವನ ಮೌಲ್ಯಗಳ ಉಪದೇಶ ನೀಡದೆ ಆಚರಿಸುತ್ತಿದ್ದರು. ಇಂಥವರು ಸಮಾಜದಲ್ಲಿ ಏಕಾಂಗಿಗಳಾಗುವುದು ಸಾಮಾನ್ಯ ಸಂಗತಿ. ಇವರು ಸಿರಿವಂತರಾಗಿರಲಿಲ್ಲ. ಆದರೆ ಸಿರಿವಂತರಿಗಿಂತ ಹೆಚ್ಚು ಭಾಗ್ಯ ಶಾಲಿ. ಇವರು ನೆನಪಿನಲ್ಲಿ ಉಳಿದಿದ್ದಾರೆ. ಮಾತುಗಳಲ್ಲಿ ಮನೆ ಮಾಡಿದ್ದಾರೆ. ಕೀರ್ತಿ ಶೇಷರಾಗುವುದು ಹೀಗೆ. 2003ನೆಯ ವರ್ಷದಲ್ಲಿ ಈ ವಿದ್ವಾಂಸ ಕವಿಯ ಜನ್ಮ ಶತಮಾನೋತ್ಸವ. ನಾವು ಉತ್ತಮ ರೀತಿಯಲ್ಲಿ ಈ ಕವಿಯನ್ನು ನೆನಪು ಮಾಡಿಕೊಳ್ಳಬೇಕು.

## ಲೆಕ್ಕಾಚಾರ

ಎಲೆ ಮನುಜನೇ
ತಾಳ್ಮೆಯಿಂದ ಕೇಳೆಂದು
ಕಿವಿಯೆರಡ ಕೊಟ್ಟ,
ಪರಾಂಬರಿಸಿ ನೋಡೆಂದು
ಕಣ್ಣೆರಡ ಕೊಟ್ಟ,
ಆ ಸೃಷ್ಟಿಕರ್ತ;
ಬಾಯಿ ಒಂದೇ ಇಟ್ಟ
ಬೊಂಬಾಯಿ ಆಗದಿರಲೆಂದು

✍ ವಿಜಯಕುಮಾರ್ ಕಾಣಚ್ಚಾರ್

# ದಣಿವಿರದ ಧೀಮಂತ ಕುರುಂಜಿ

✍ ಕುತ್ಯಾಳ ನಾಗಪ್ಪ ಗೌಡ (ಕಿರಣ)



ಕಾವ್ಯವೆಂದರೇನೆಂದು ಒಕ್ಕಣಿಸಲು ನನ್ನನ್ನು
ಒತ್ತಾಯಿಸಿದರೆ, ನಾನು ಹೇಳುವೆ, 'ಶಬ್ದಗಳು
ಕಾರ್ಯಗತವಾದಾಗ ಕಾವ್ಯವಾಗುತ್ತದೆ'

—ರಾಬರ್ಟ್ ಫ್ರಾಸ್ಟ್

ಸಾಹಿತ್ಯದ ಉಪಕರಣ ಭಾಷೆ: ಶಬ್ದಗಳು-ಶಬ್ದಗಳ ಮೂಲಕ ಕೆಲಸ ಮಾಡುವ ಕವಿಗೆ ಮಾನವ ಜೀವನವನ್ನು ಸಹ್ಯವಾಗಿಸುವ ಹೊಣೆಗಾರಿಕೆಯಿದೆ. ವಿಘಟನೆಯೇ ಸಹಜ, ಪ್ರಬಲ ಶಕ್ತಿಯಾಗಿರುವ ಪ್ರಕೃತಿಯಲ್ಲಿ ಸಂಘಟಿಸುವ, ನಿರಾಸೆ ಆವರಿಸದಂತೆ ರಕ್ಷಿಸುವ, ಜೀವಂತಿಕೆಯನ್ನು ಉಳಿಸುವ ಕೆಲಸವನ್ನು ಕವಿ ಭಾಷೆಯ ಮೂಲಕ ಮಾಡುತ್ತಾನೆ. ಭಾಷೆಯಲ್ಲಿರುವುದು ಕಾರ್ಯರೂಪಕ್ಕೆ ಬರಬೇಕು. ಆಗ ಸಫಲವಾಗುತ್ತದೆ. ಅಮೆರಿಕದ ಪ್ರಖ್ಯಾತ ಕವಿ ರಾಬರ್ಟ್ ಫ್ರಾಸ್ಟ್ ಹೇಳಿದ್ದು ಇದನ್ನೇ, ಅಧ್ಯಕ್ಷ ಜಾನ್ ಕೆನಡಿ, ಪ್ರಧಾನಿ ಜವಾಹರಲಾಲ್ ನೆಹರು ಇವರಿಗೆ ಫ್ರಾಸ್ಟ್ ಮೆಚ್ಚಿನ ಕವಿ.

ಫ್ರಾಸ್ಟ್ ಹೇಳುವ ಕಾವ್ಯದ ಆಶಯ ಕುರುಂಜಿ ವೆಂಕಟರಮಣ ಗೌಡರ ಸಾಧನೆಗೆ ಸಂವಾದಿಯಾಗಿದೆ. ಇಲ್ಲಿ ಆದರ್ಶ ಫಲಿಸಿದೆ. ಕಾಣಬಯಸಿದ್ದು ಕನಸಾಗಿ ಉಳಿದಿಲ್ಲ, ನಿಜವಾಗಿದೆ. ಗ್ರಾಮೀಣ ಪ್ರದೇಶದ ಬಡ ಕುಟುಂಬಗಳ ಬುದ್ಧಿವಂತ ಮಕ್ಕಳು ಹೈಸ್ಕೂಲು ಮೆಟ್ಟಿಲು ಹತ್ತಿ, ಹೊರಗೆ ಬಂದಾಗ ಮುಂದೇನೆಂಬ ಭಾರೀ ಗಾತ್ರ ಪ್ರಶ್ನೆ ಅಣಕಿಸುತ್ತಿತ್ತು. ಆರ್ಥಿಕ ಬಲವಿದ್ದ ಕೆಲವೇ ಕೆಲವು ಮಂದಿಗೆ ಪೂರದ ಮಂಗಳೂರಿನಲ್ಲಿ ಕಾಲೇಜು ಶಿಕ್ಷಣದ ಬಾಗಿಲು ತೆರೆದಿರುತ್ತಿತ್ತು. 1958ರಿಂದ ಇನ್ನು ಕೆಲವರನ್ನು ಪುತ್ತೂರು ಸ್ವಾಗತಿಸಿತು. ತುತ್ತಿನ ಚೀಲ ತುಂಬಿಸಲು ಪರದಾಡುತ್ತಿದ್ದವರ ಮಕ್ಕಳ ಪಾಡು ಹಾಗೆಯೇ ಉಳಿದಿತ್ತು. ಈ ಸ್ಥಿತಿಯನ್ನು ನಿವಾರಿಸಲು ಕುರುಂಜಿಯವರು ಸುಳ್ಯದಲ್ಲಿ ಫಸ್ಟ್‌ಗ್ರೇಡ್ ಕಾಲೇಜು ತೆರೆದರು. ಐ.ಟಿ.ಐ. ಅಸ್ತಿತ್ವಕ್ಕೆ ಬಂದಿತು. ಪೊಲಿಟೆಕ್ನಿಕ್ ತಲೆ ಎತ್ತಿತು. ಇಂಜಿನಿಯರಿಂಗ್ ಕಾಲೇಜು ಸ್ಥಾಪನೆಯಾಗಿ ರಾಷ್ಟ್ರದ ಗಮನ ಸೆಳೆಯಿತು. ನರ್ಸಿಂಗ್ ಶಾಲೆ ಕಾರ್ಯಪ್ರವೃತ್ತವಾಯಿತು. ಡೆಂಟಲ್ ಕಾಲೇಜಿನ ಸ್ಥಾಪನೆಯಿಂದ ವಿದ್ಯಾಕಾಂಕ್ಷಿಗಳಿಗೆ ಸುಳ್ಯ ಸುಪರಿಚಿತವಾಯಿತು. ಆಯುರ್ವೇದ ವೈದ್ಯಕೀಯ ಕಾಲೇಜು, ಎಂ.ಬಿ.ಎ. ಮತ್ತು ಎಂ.ಸಿ.ಎ. ಸ್ನಾತಕೋತ್ತರ ತರಗತಿಗಳು ಇತ್ತೀಚೆಗೆ ಪ್ರಾರಂಭವಾಗಿವೆ. ಕ್ಯಾಂಪಸ್‌ನಲ್ಲಿ ಕಾನೂನು ಕಾಲೇಜು, ಆಂಗ್ಲ ಮಾಧ್ಯಮ ಪ್ರೌಢಶಾಲೆ ಪ್ರಾರಂಭವಾಗಿ ಕೆಲವು ವರ್ಷಗಳಾಗಿವೆ. ಸುಸಜ್ಜಿತ ಕಟ್ಟಡಗಳನ್ನು ಹೊಂದಿರುವ ಈ ವಿದ್ಯಾಕೇಂದ್ರಗಳು ಅಗತ್ಯವಿರುವ ಸಕಲ ಸಿದ್ಧತೆಗಳೊಂದಿಗೆ ಅಸ್ತಿತ್ವಕ್ಕೆ ಬಂದಿವೆಯೆಂಬುದು ಕೂಡಾ ಅತ್ಯಂತ ಮುಖ್ಯವಾದ ವಿಚಾರ. ಈಗ ಮೆಡಿಕಲ್ ಕಾಲೇಜು ಸ್ಥಾಪನೆಯಾಗಿದೆ. ಸುಸಜ್ಜಿತ ಆಸ್ಪತ್ರೆಯಿದೆ. ಕುರುಂಜಿಯವರ ಬಹುದಿನಗಳ ಕನಸು ನನಸಾಗಿದೆ. ಸುಳ್ಯದ ಶ್ರೀ ಚೆನ್ನಕೇಶವ ದೇವಸ್ಥಾನದ ಜೀರ್ಣೋದ್ಧಾರದ ಕಾರ್ಯ ಇವರ ನೇತೃತ್ವದಲ್ಲಿ ನಡೆಯುತ್ತಿದೆ.

ಇದು ಸಾಧ್ಯವಾದುದು ಒಬ್ಬ ವ್ಯಕ್ತಿಯಿಂದ. ರೈತ ಕುಟುಂಬದ ಒಬ್ಬ ಛಲಗಾರನಿಂದ. ಭೂಮಿಗೆ ಕೈಮುಗಿದು ದುಡಿದು ಪಡೆದ ಛಲದಿಂದ, ಮಣ್ಣಿನ ಮಕ್ಕಳಿಗೆ ಸಹಜವಾಗಿರುವ ಮನೋಬಲದಿಂದ, 'ಭೂದೇವಿಯ ಕರುಣೆಯಿಂದ, ದೇವರ ದಯೆಯಿಂದ' ಕುರುಂಜಿಯವರೇ ಹೀಗೆನ್ನುತ್ತಾರೆ. ಉತ್ತಮ ಕೆಲಸ ಮಾಡುವಲ್ಲಿ ದೇವರು ಇರುವುದು ನಿಜವೆನ್ನುತ್ತಾರೆ ಕುರುಂಜಿಯವರು.

ಇಂದು ಸುಳ್ಯ ಮತ್ತು ಆಸುಪಾಸಿನ ತಾಲೂಕುಗಳ ಬಡವರ ಮನೆಗಳಲ್ಲಿ ಪದವೀಧರರನ್ನು, ತಾಂತ್ರಿಕ ಶಿಕ್ಷಣ ಪಡೆದ ಯುವ ಜನತೆಯನ್ನು ಕಾಣುವುದು ಸಾಧ್ಯವಾಗಿದೆ. ಸಮಾಜವೇ ಪರಿವರ್ತನೆಯ ಹಾದಿಯಲ್ಲಿದೆ. ಇದರಲ್ಲಿ ಕುರುಂಜಿಯವರ ಕೊಡುಗೆ ಗಣನೀಯ. ಸದಾ ಸ್ಮರಣೀಯ. ಈ ದಣಿವಿರದ ಧೀಮಂತನಿಗೆ ಜನತೆಯ ಹೃದಯದಲ್ಲಿ ಅತ್ಯಂತ ಗೌರವದ ಸ್ಥಾನವಿದೆ. ಇವರಿಗೆ ಅರುವತ್ತು ತುಂಬಿದಾಗ ಅಭಿಮಾನಿಗಳು ಸಂಭ್ರಮದಿಂದ ಹುಟ್ಟುಹಬ್ಬವನ್ನು ಆಚರಿಸಿದರು. ಹಿರಿಯರು, ಪ್ರಾಜ್ಞರು ಭಾಗವಹಿಸಿದ್ದರು. ಅದು ಊರಿನ ಹಬ್ಬವಾಗಿತ್ತು. ನಾನೊಂದು ಕವಿತೆ ಬರೆದೆ. ಅದು 'ಸುಧಾ'ದಲ್ಲಿ ಪ್ರಕಟವಾಯಿತು. ಕವಿತೆಯ ಹೆಸರು : ಹರುಷ ಬೆಳೆಸುವ ಧೀರ.

ಈ ನೆಲದ ದಣಿವಿರದ ಧೀಮಂತ ನೀವು:
ಈ ಜನರ ಧೀಶಕ್ತಿ, ಕಣ್ಣೊಂಬೆ ನೀವು,
ನಿತ್ಯ ಉರಿಯುವ ಸೂರ್ಯ:
ನೆಲಕೆ ಬೆಳಕಿನ ಭಾಗ್ಯ,
ನೀವು ಚೇತನ ಚಿಲುಮೆ:

ಹರುಷ ಬೆಳೆಸುವ ಧೀರ
ನಡೆವ ಹಾದಿಯ ಮೇಲೆ ಹೊಳೆವ ಹೆಜ್ಜೆಯನಿಡುವ
ಎದೆಗಾರ, ಛಲಗಾರ, ನಿಮಗೆ ನಮನ,
ಸಜ್ಜನ, ನಗೆಗಾರ, ಧ್ಯೇಯನಿಷ್ಠೆಯ ಹಿರಿಯ
ಸಹನೆ ತುಂಬುವ ಜೀವ, ನಿಮಗೆ ನಮನ.
ಸ್ತುತಿಯ ಹೆಚ್ಚಿಸಲಿಲ್ಲ, ನಿಂದೆ ತಗ್ಗಿಸಲಿಲ್ಲ,
ದಿಕ್ಕು ತಪ್ಪಿಸಲಿಲ್ಲ, ಆದ್ವಿತೀಯ.
ಉಳ್ಳಯ್ಯರೆಷ್ಟಿಲ್ಲ? ನೀವೆಲ್ಲರಂತಲ್ಲ,
ಶಬ್ದ ಸೇವೆಗೆ ನೀವು ಬದ್ಧರಲ್ಲ!
ಕತ್ತಲೆಯ ತಲೆಮೇಲೆ ಹಚ್ಚಿ ಬಿಟ್ಟಿರಿ ದೀಪ:
ಅಜ್ಞಾನ ತತ್ತರಿಸದೆ ಹಿಗ್ಗಾಯ್ತು ನಮಗೆ,
ಉರಿಯುವ ದೀಪ ಉರಿಸುತಲಿರಲಿ
ತೆರೆಯು ಎಲ್ಲೆಡೆ ಬೆಳಕಿನ ಮಳಿಗೆ.

ಈ ಸಮಾಜದ ಸೇವಕನಿಗೆ ದೇಶ ವಿದೇಶಗಳ ಪ್ರಶಸ್ತಿ, ಪುರಸ್ಕಾರಗಳು ದೊರೆತಿವೆ. ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿ ಇನ್ನೂ ಬಂದಿಲ್ಲವೆಂದರೆ ಆಶ್ಚರ್ಯವಾಗುತ್ತದೆ. ಇವರಿಗೆ ಪ್ರಶಸ್ತಿಗಳ ಅಗತ್ಯವಿರಲಾರದು. ಜನಮನ್ನಣೆಗಿಂತ ಪ್ರಶಸ್ತಿ ದೊಡ್ಡದಲ್ಲ. ಕುರುಂಜಿಯಂಥವರಿಗೆ ಪ್ರಶಸ್ತಿ ಕೊಟ್ಟಾಗ ಮೌಲ್ಯ ವೃದ್ಧಿಯಾಗುತ್ತದೆ. ●

## ಒಕ್ಕಲಿಗರ ಜನಾಂಗದ ಒಳಪಂಗಡಗಳ ಹೆಸರುಗಳು

1. ಗಂಗಡಿಕಾರ, 2.ಮರಸು, 3.ಮುಸುಕು, 4. ರೆಡ್ಡಿ, 5. ಕುಂಚಟಿಗ, 6. ಹಳ್ಳಿಕಾರ, 7. ನೊಣಬ, 8. ಸರ್ಪ, 9. ಚೋಳ 10. ಸೆಟ್ಟಿಗಾರ, 11. ಏಳುಮನೆ, 12. ಭಂಟರು, 13. ಮಲೆಗೌಡ, 14. ಉಪ್ಪಿನಕೊಳಗ, 15. ಹೇಮರೆಡ್ಡಿ, 16. ಸ್ವಲ್ಪ, 17. ಮೋಡಾಟು, 18. ಜೋತ್ರದವರು, 19. ಅರವೇದಿಗ, 20. ಅಜಮಾರು, 21. ಮಾಳವ, 22. ಮಾಣಗ, 23. ನಾಮದಾರಿ, 24. ತುಳಿವ, 25. ಲಿಂಗಲಿಕ, 26. ಕುಳಿಬೆಡಗ, 27. ಪಾಂಡರು, 28. ಬೊಗ್ಗರು, 29. ಡವಾರು, 30. ಬಂಡೇರು, 31. ಕುಶಲಿ, 32. ರಾಜಪೂ, 33. ಅನುಮ, 34. ಸಿಂಗರು, 35. ಏಳನಾಟಿ, 36. ಕೋದಾಟು, 37. ಕಾಕಿನಾಟ, 38. ಎತ್ತಿನ ಕುಂಚಟಿಗ, 39. ತಂಡಗೌಡ, 40. ಮಡ್ಡರು, 41. ಮೊಗ್ಗದರು, 42. ಹಾಲಕ್ಕಿ ಒಕ್ಕಲು, 43. ದಾಸವಂಟಿಕೆ, 44. ದೊಡ್ಡಗಾಂಟಿ, 45. ಆಲಮಟ್ಟಿ, 46. ಗಂಪಲ, 47. ಕಮ್ಮರು, 48. ಗೋಸಂಗಿ, 49 ಕಪವಳ್ಳಿ, 50. ಶಂಕಜಾತಿ, 51. ಸಣ್ಣಗೋಂಡಿ, 52. ಗಂಗಿ, 53. ಹಳೇ ಒಕ್ಕಲು, 54. ಕಾಮ ಒಕ್ಕಲು, 55. ವಾಲಿಗುಂಡ, 56. ದೇವನಮಕ್ಕಳು, 57. ಸಮುದ್ರಕುಲ, 58. ಕಮ್ಮನಾಡು, 59. ಒಕ್ಕಲಿಗ ರೆಡ್ಡಿ, 60. ಬೆಳ್ಳಿ ಒಕ್ಕಲಿಗ, 61. ಗೌಂಡರು, 62. ಹಾಲು ಒಕ್ಕಲಿಗ, 63. ಹೊಲ ಕಾಪರು, 64. ಹಲವಕ್ಕಿವಕ್ಕಲ್, 65. ಅಟ್ಟಿ ಒಕ್ಕಲು, 66. ಗಮುಗವಡ, 67. ಗ್ರಾಮೊಕ್ಕಲ್, 68. ಕರೇ ಒಕ್ಕಲ್ 69. ಕುಂಚ ಒಕ್ಕಲ್, 70. ಶೀಲ ಒಕ್ಕಲ್, 71. ಒಕ್ಕಲ್, 72. ಕೊಂಕಣಿಗ ಒಕ್ಕಲಿಗ , 73. ಗಾಮುಗೌಡ, 74. ನಾಡವರು, 75. ವಕ್ಕಲಿಗ, 76. ದಾಸ, 77. ಗೌಡ, 78. ಕಾಮ ಒಕ್ಕಲಿಗ, 79. ಹೆಗಡೆ, 80. ಕಮ್ಮಗೌಡ, 81. ಗವಡ, 82. ರೆಡ್ಡಿ, 83. ಹಳೇಪೈಕ, 84. ಎಲ್ಲಮ ಕಾಪು, 85. ಬಡಗರು, 86. ಬೆಳಕವಾಡಿ, 87. ಹೊಸದೇವರು, 88. ಕುಂಬಿ, 89. ಪೆಟ್ಟಿಗೆ ಸಾಲಿನ, 90. ಪಾಳ್ಯ, 91. ನಾಡು, 92. ಅರಮುಡಿ, 93. ಕೂಟಕ ಒಕ್ಕಲು, 94. ಜಾನಕಲ್ಲೋರು, 95. ಸಾದರು, 96. ಪಾಂಡ್ಯ ಒಕ್ಕಲಿಗ, 97. ನಾಡಗೌಡ, 98. ದೇಶಗೌಡ, 99. ಜಾಟ್ಸ್ 100. ಗಂಗಕುಲ, 101 ಕೊಡಿಗೆ ಗೌಡರು, 102. ಕೊಟ್ಟಿ ಒಕ್ಕಲಿಗ, 103. ಕೂಡು ಒಕ್ಕಲಿಗ, 104. ಮರಚ, 105. ಊಡಿಗಗೌಡ, 106. ನಾಡವಾರ, 107. ತೆಲಗು ಗೌಡ, 108. ನಾಯರ್, 109. ಗ್ರಾಮ ಒಕ್ಕಲು, 110. ತುಳ್ಳೇರು, 111. ವೆಲ್ಲಾಳರು, 112. ಕೊಂಕಣಿಗ ಒಕ್ಕಲಿಗ ಇವುಗಳು ಒಕ್ಕಲಿಗ ಉಪಜಾತಿಗಳಾಗಿವೆ.

(ಈ ಹಿಂದೆ 62ಉಪಜಾತಿಗಳು ಇದ್ದು ಇತ್ತೀಚಿನ ಸಮೀಕ್ಷೇ ಪ್ರಕಾರ ಈ ಮುಂದಿನ ಉಪಜಾತಿಗಳು ಸೇರಿ ಒಟ್ಟು 112ಉಪಜಾತಿಗಳು ಒಕ್ಕಲಿಗರ ಜನಾಂಗಕ್ಕೆ ಸೇರಿವೆ ಎಂದು ಊಹಿಸಲಾಗಿದೆ.)

# ಬಡವರ ಬಂಧು ಬೈರೇಗೌಡರು

ಚಿಕ್ಕಮಗಳೂರು ಜಿಲ್ಲೆಯ 'ಮೂಡಿಗೆರೆ' ಅತಿ ಪ್ರಮುಖವಾದ ತಾಲೂಕು ಕೇಂದ್ರ. ಅದು ಮಲೆನಾಡು ಹಾಗೂ ಸಂಪತ್ತಿನ ಕಣಜ. ಐತಿಹಾಸಿಕವಾಗಿ, ಪೌರಣಿಕವಾಗಿ, ರಾಜಕೀಯವಾಗಿ, ಆರ್ಥಿಕವಾಗಿ 'ಮೂಡಿಗೆರೆ'ಗೆ ಒಂದು ವಿಶೇಷ ಸ್ಥಾನವುಂಟು.

ಮೂಡಿಗೆರೆ ತಾಲೂಕಿನ ಹಳೇಕೋಟೆ ಒಂದು ಸಾಮಾನ್ಯ ಗ್ರಾಮ. ಶ್ರೀಮತಿ ಶಿವಮ್ಮ ಮತ್ತು ಶ್ರೀ ಭದ್ರೇಗೌಡರು ಕೃಷಿಕರೂ,ದೈವ ಸಂಪನ್ನರೂ, ದಾನ ಧರ್ಮದ ಗುಣವುಳ್ಳವರೂ, ಸುಸಂಸ್ಕೃತರೂ ಆದ ದಂಪತಿಗಳು. ಈ ಗೌಡ ದಂಪತಿಗಳಿಗೆ ಆರು ಜನ ಮಕ್ಕಳು ನಂಜೇಗೌಡ, ಬೈರೇಗೌಡ , ರಾಯಪ್ಪಗೌಡ ಈ ಮೂವರು ಗಂಡು ಮಕ್ಕಳು. ಪುಟ್ಟಮ್ಮ, ಮಲ್ಲಮ್ಮ, ಮಂಜಮ್ಮ ಈ ಮೂವರು ಹೆಣ್ಣು ಮಕ್ಕಳು.

ಬೈರೇಗೌಡರು ಜನಿಸಿದ್ದು ಜನವರಿ 30,1919ರ ಗುರುವಾರದಂದು, ಪ್ರಾಥಮಿಕ ಶಾಲೆಯವರೆವಿಗೂ ಓದು. ಚಿಕ್ಕಂದಿನಿಂದಲೇ ಕೃಷಿಯ ಕಡೆಗೆ ಒಲವು. ಆದುದರಿಂದ ಮುಂದೆ ಓದಿಗೆ ತಿಲಾಂಜಲಿ. ದನ ಕಾಯುವುದು, ಗಾಡಿ ಹೊಡೆಯುವುದು, ಸಂತೆಗೆ ಹೋಗಿ ಬರುವುದು, ವ್ಯಾಪಾರ ಹಾಗೂ ವ್ಯವಸಾಯ ಮಾಡುವುದರಲ್ಲಿ ತೀವ್ರ ಕಾಳಜಿ. ಅಂದಿನಿಂದಲೇ ತಮ್ಮನ್ನು ಸಂಪೂರ್ಣವಾಗಿ ವ್ಯವಸಾಯಕ್ಕೆ ಅರ್ಪಣೆ ಮಾಡಿಕೊಂಡು ನಂತರ ಸುಪ್ರಸಿದ್ಧ ಕಾಫಿ ಬೆಳೆಗಾರರೆನಿಸಿಕೊಂಡರು. ಮಣ್ಣಿನ ಮಗ, ಕಷ್ಟ ಜೀವಿ, ಅಪ್ಪಟ ಗ್ರಾಮೀಣ ಸಂಸ್ಕೃತಿಯ ಬೈರೇಗೌಡರು ಮುಂದೆ ನೆಲಸಿದ್ದು 'ಹಳಸೆ' ಗ್ರಾಮದಲ್ಲಿ ಅಂದಿನಿಂದ 'ಹಳಸೆ ಬೈರೇಗೌಡ'ರೆಂದೇ ಎಲ್ಲೆಡೆ ಖ್ಯಾತರಾದರು.

ಕ್ರಿಯಾಶೀಲ, ದುಡಿಮೆಗಾರ, ಸ್ನೇಹಮಯಿ ಬೈರೇಗೌಡರು ಹೆಜ್ಜೆ ಹೆಜ್ಜೆಯಾಗಿ ಸಾರ್ವಜನಿಕ ಬದುಕಿಗೆ ಅಡಿಯಿಟ್ಟರು. ನಾಲ್ಕು ಗೋಡೆಗಳ ಮಧ್ಯೆ ಕಲಿತ ಶಿಕ್ಷಣಕ್ಕಿಂತ ಲೋಕವನ್ನು ಸುತ್ತಿ ಪಡೆದ ಶಿಕ್ಷಣವೇ ಹೆಚ್ಚು. ಸಮಾಜದ ಕೆಳಸ್ತರದ ಜನರೊಂದಿಗೆ ಆದಿಯಿಂದಲೂ ಬೆಳೆದು ಬಂದರು. ಜನರೊಂದಿಗೆ ಬೆರೆತು ಕಲಿತ ಜ್ಞಾನ ಅಪಾರ, ಅಗಾಧ.

ಗೌಡರು ಸಂಸಾರ ಜೀವನ ಆರಂಭಿಸಿದ್ದು 1948ರಲ್ಲಿ ಶ್ರೀಮತಿ ಬಾಸಮ್ಮ ಬೈರೇಗೌಡರ ಧರ್ಮಪತ್ನಿ. ಸತಿ-ಪತಿಗಳಿಬ್ಬರೂ ಬೆರೆತು ಬಾಳಿದರು, ಜೀವಕ್ಕೆ ಜೀವವಾಗಿದ್ದರು. ಈ ದಂಪತಿಗಳಿಗೆ ಮೂವರು ಮಕ್ಕಳು . ಶ್ರೀ ಹೆಚ್. ಬಿ. ರಾಜಗೋಪಾಲ್, ಶ್ರೀ



ಹೆಚ್.ಬಿ. ಜಯಪ್ರಸಾದ್ ಹಾಗೂ ಶ್ರೀಮತಿ ಡಾ| ಹೆಚ್.ಬಿ.ಪುಷ್ಪ. ಆಕೆಯ ಗಂಡ ಡಾ| ಪ್ರಕಾಶ್. ಬೈರೇಗೌಡರು ತಾವು ಮಾಧ್ಯಮಿಕ ಶಾಲೆಯ ಮೆಟ್ಟಲೇರದಿದ್ದರೂ ಮಕ್ಕಳೆಲ್ಲರನ್ನೂ ಚೆನ್ನಾಗಿ ಓದಿಸಿ ಪದವೀಧರರನ್ನಾಗಿ ಮಾಡಿದರು. ಶ್ರೀಮತಿ ಬಾಸಮ್ಮನವರು ಅನಿರೀಕ್ಷಿತವಾಗಿ 1953ರ ಜನವರಿ 29ರಂದು ದೈವಾಧೀನರಾದರು.

ಬೈರೇಗೌಡರಿಗೆ 1953ರಲ್ಲಿ ಎರಡನೇ ವಿವಾಹವಾಯಿತು. ಶ್ರೀಮತಿ ಕೋಮಲಮ್ಮ ಬೈರೇಗೌಡರನ್ನು ಕೈಹಿಡಿದರು. ಈ ದಾಂಪತ್ಯದಲ್ಲಿ ಒಂದು ಗಂಡು, ಒಂದು ಹೆಣ್ಣು ಅವರೇ ಶ್ರೀ ಹೆಚ್. ಬಿ. ಶಿವಣ್ಣ ಹಾಗೂ ಲೀಲಾವತಿ. ಆಕೆಯ ಗಂಡ ಎಂ.ಬಿ.ನಾಗರಾಜ್ ಕಾಫಿ ಬೆಳೆಗಾರರು.

### ಅವರ ಪ್ರವಾಸ

ಸಾಮಾನ್ಯ ಬೈರೇಗೌಡರು ದೇಶವಿದೇಶಗಳನ್ನು ಸುತ್ತಿ ಅಪಾರ ಜೀವನಾನುಭವಗಳನ್ನು ಅಪೂರ್ವ ಮಾಹಿತಿಗಳನ್ನು ತಂದು ಸುತ್ತಮುತ್ತಲ ಜನರಿಗೆ ಹಂಚಿದ್ದಾರೆ. ಕೇಳುಗರನ್ನು 'ವಿದೇಶಯಾತ್ರೆ' ಮಾಡಿಸಿದ್ದಾರೆ. ಆ ರೀತಿಯ ವಿವರಣೆ, ಆಳವಾದ ನೆನಪು, ಅಂಕಿ-ಅಂಶ ಗೌಡರದು, ಕಾಶ್ಮೀರದಿಂದ ಕನ್ಯಾಕುಮಾರಿಯವರೆಗೆ, ಬರ್ಮಾದಿಂದ ಪಾಕಿಸ್ತಾನದವರೆಗೆ ಸುತ್ತಾಟ. ಉತ್ತರ ಅಮೇರಿಕಾ,

ದಕ್ಷಿಣ ಅಮೇರಿಕಾ, ಇಂಗ್ಲೆಂಡ್, ಕೆನಡಾ, ಅರ್ಜೆಂಟೈನಾ, ಮೆಕ್ಸಿಕೋ, ಕೊಲೆರೆಡೊ, ಬ್ರೆಜಿಲ್ ಹೀಗೆ ಅನೇಕ ಪಾಶ್ಚಿಮಾತ್ಯ ದೇಶಗಳಿಗೆ ಭೇಟಿಕೊಟ್ಟು ಪ್ರಮುಖ ಬೆಳೆಗಳಾದ ಕಾಫಿ, ಏಲಕ್ಕಿ, ಕಬ್ಬು ಮುಂತಾದವುಗಳ ಬಗ್ಗೆ ಅನುಭವ ಪಡೆದು ಅಲ್ಲಿನ ಜನಜೀವನ, ರಾಜಕೀಯ, ಕೈಗಾರಿಕೆ ಮುಂತಾದವುಗಳ ಬಗ್ಗೆ ಮಾಹಿತಿಗಳನ್ನು ಪಡೆದುಕೊಂಡು ಬಂದು ಸ್ವದೇಶದ ಗ್ರಾಮಾಂತರ ಪ್ರದೇಶಗಳಲ್ಲಿ ತಿಳಿಸಿದ ಹೆಗ್ಗಳಿಕೆ ಅವರದು.

ಶ್ರೀ ಜಯಚಾಮರಾಜೇಂದ್ರ ಒಡೆಯರ್ ಅವರನ್ನು ಹಳಸೆ ನಿವಾಸಕ್ಕೆ ಬರಮಾಡಿಕೊಂಡು ತಮ್ಮ ಗೌರವ ಸಲ್ಲಿಸಿದ್ದರು. ಮೂಡಿಗೆರೆಯಲ್ಲಿ ನಡೆದ ದೊಡ್ಡ ಸಮಾರಂಭದ ನಂತರ ಮಹಾರಾಜರು "ದಸರಾ ಮಹೋತ್ಸವವನ್ನೇ ಮಾಡಿದಿರಿ"ಎಂದು ಪ್ರಶಂಸಿಸಿದರಂತೆ, 'ಗೌಡರಿಂದ ನಾವು ಮಹಾರಾಜರನ್ನು ನೋಡಿದಂತಾಯಿತು' ಎಂದು ಜನ ಈಗಲೂ ಹೇಳುತ್ತಾರೆ.

ಬೈರೇಗೌಡರದು ಹೋರಾಟದ ಬದುಕು. ಅವರ ಜೀವನ ಸಾಹಸಮಯ. ಹಳೇಕೋಟೆಯ ಸಾಮಾನ್ಯ ಮನುಷ್ಯ ದೇಶ ವಿದೇಶ ಸುತ್ತಿ ಬಂದು ಉನ್ನತ ಸ್ಥಿತಿಗೇರಿದ್ದು ಒಂದು ಹೋರಾಟದ ಕಥೆ, ಅದ್ಭುತ ಚರಿತ್ರೆ. ಅನಕ್ಷರಸ್ಥ ಎಂದುಕೊಂಡು ಅಮೇರಿಕೆಯವರೆಗೂ ಹೋಗಿ ಬಂದರೂ ಹಳೇಕೋಟೆ ಹಳಸೆಯನ್ನು ಮರೆತವರಲ್ಲ. ಅವರಿಗೆ ಗುಡಿಸಲಿನಿಂದ-ಗುಡಿಯವರೆಗೆ, ಅರಮನೆಯವರೆಗೂ ಸ್ನೇಹ ಬಳಗ. ವ್ಯವಸಾಯದಿಂದ ವ್ಯವಹಾರಿಕ ಜಗತ್ತಿನವರೆಗೆ ಜ್ಞಾನ. ದೇಶ ವಿದೇಶ ಸುತ್ತಿ ಬಂದರೂ "ಬಡ ಬೈರೇಗೌಡನ ಹಳೆಯ ನೆನಪುಗಳು "ಸದಾ ಚಿರಸ್ಮರಣೀಯ.

## ಮಡದಿಯ ಸಹಕಾರ

ಬೈರೇಗೌಡರ ಮಡದಿ ಶ್ರೀಮತಿ ಕೋಮಲಮ್ಮ ಗೌಡರಷ್ಟೇ ತಾಳ್ಮೆ, ಶಿಸ್ತಿನವರು. ದಿನನಿತ್ಯ ಎಡೆಬಿಡದೆ ಅವರ ಆರೋಗ್ಯದತ್ತ ಗಮನ ಕೊಡುತ್ತಿದ್ದರು. ಗೌಡರು ಜಿಲ್ಲಾ ಪರಿಷತ್ ಅಧ್ಯಕ್ಷರಾದ ಮೇಲೆ ಅವರ ವಾಸ್ತವ್ಯ ಚಿಕ್ಕಮಗಳೂರಿನ 'ಪ್ಲಾಂಟೇಷನ್ ಹೌಸ್'ನಲ್ಲೆ. ದಿನ ನಿತ್ಯ ನೂರಾರು ಜನ ಬಂದು ಹೋಗುವರು. ಅವರು ಕೂಡ ಸರಳವಾಗಿ ವಿನಯ ಹಾಗೂ ಸೌಜನ್ಯದಿಂದ ಬಂದವರಿಗೆಲ್ಲ ಕಾಫಿ ಕೊಡುತ್ತಿದ್ದರು. ಗೌಡರು ಹಾಸಿಗೆಯಲ್ಲಿರಲಿ, ಸ್ನಾನದ ಮನೆಯಲ್ಲಿರಲಿ, ಊಟದ ಕೋಣೆಯಲ್ಲಿರಲಿ ಕೂಡಲೆ ವಾರ್ತೆಯನ್ನು ತಿಳಿಸುತ್ತಿದ್ದರು. ಸತಿ-ಪತಿಗಳಿಬ್ಬರದೂ ಸೌಮ್ಯ ಸ್ವಭಾವ. ಕೋಮಲಮ್ಮ ಅವರ ಮಾತು ಕಡಿಮೆ, ಕೆಲಸ ಜಾಸ್ತಿ. ಬೈರೇಗೌಡರ ಯಶಸ್ಸಿನ ಹಿಂದೆ ಶ್ರೀಮತಿ ಕೋಮಲಮ್ಮ ಅವರ ದುಡಿಮೆ, ತ್ಯಾಗ, ಸೌಮ್ಯತೆ, ಸದ್ಗುಣಗಳೂ ಸೇರಿವೆ. ಕೋಮಲಮ್ಮ'ತುಂಬಿದ ಕೊಡ.'

## ಮಠ ಮಾನ್ಯಗಳ ಸಂಪರ್ಕ

ಬೈರೇಗೌಡರಿಗೆ ಕನ್ನಡನಾಡಿನ ಎಲ್ಲ ಮಠಾಧಿಪತಿಗಳ - ಮಠಾಧೀಶರ-ಧರ್ಮಗುರುಗಳ ನಿಕಟ ಪರಿಚಯ ಮತ್ತು ಸಂಪರ್ಕವಿತ್ತು. ಅವರೊಬ್ಬ ಮಹಾದೈವಭಕ್ತರು. ಜಾತ್ಯಾತೀತ ವ್ಯಕ್ತಿಗಳಾಗಿದ್ದರು. ಶೃಂಗೇರಿ, ಬಾಳೆಹೊನ್ನೂರು, ಹೊಂಬುಜ, ಸಿದ್ಧಗಂಗೆ, ಆದಿಚುಂಚನಗಿರಿ, ಧರ್ಮಸ್ಥಳ-ಮುಂತಾದವುಗಳ ಆತ್ಮೀಯ ಸಂಪರ್ಕವಿತ್ತು. 'ಹಳಸೆ'ಗೆ ಎಲ್ಲ ಸ್ವಾಮಿಗಳೂ ಬಂದು ಹೋಗಿದ್ದಾರೆ.

19-2-92ರ ಎಂ. ಜೆ. ಕೋದಂಡರಾಮ ಶೆಟ್ಟಿ ಅಭಿನಂದನಾ ಸಮಾರಂಭಕ್ಕೆ ಸಿರಿಗೆರೆಯ ಶ್ರೀ ಶ್ರೀ ಪಂಡಿತಾರಾಧ್ಯ ಶಿವಚಾರ್ಯ ಮಹಾಸ್ವಾಮಿಗಳವರನ್ನು ಒಪ್ಪಿಸಿಕೊಂಡು ಬರಲು ಕಳಿಸಿದ್ದರು. ಸ್ವಾಮಿಗಳು 'ಒಪ್ಪಿದರು'ಎಂದು ಹೇಳುತ್ತಿದ್ದಂತೆ ಅವರಿಗೆ ಆದ ಸಂತೋಷ ಅಷ್ಟಿಷ್ಟಲ್ಲ.

ಕೃಪೆ:ಹೊಸದಿಗಂತ

## ಡಿ.ಕೆ.ತಾರಾದೇವಿಯವರ ಮಾತಿನಲ್ಲಿ............

ಬೈರೇಗೌಡರ ನಿಧನದಿಂದ ಒಬ್ಬ ಹಿರಿಯ ಸ್ವಾತಂತ್ರ್ಯ ಹೋರಾಟಗಾರ, ಗಾಂಧೀವಾದಿ, ಅನುಭವಿ ರಾಜಕಾರಣಿಯನ್ನು ಕಳೆದುಕೊಂಡಂತಾಗಿದೆ.ಅವರ ಆ ಸ್ಥಾನವನ್ನು ಜಿಲ್ಲೆಯಲ್ಲಿ ಯಾರೂ ತುಂಬಲಾರರು. ಸಮಾರು 23 ವರ್ಷಗಳ ಅತ್ಯಂತ ನಿಕಟ ಪರಿಚಯದಲ್ಲಿ ಹಳಸೆ ಅಂಥ ವಿಶಿಷ್ಟ ವ್ಯಕ್ತಿಯನ್ನು ನಾನು ಕಂಡಿಲ್ಲ ಅವರು ನನ್ನ ತಂದೆಯವರ ಗೆಳೆಯರು, ಇಬ್ಬರೂ ಒಟ್ಟಿಗೆ ಜಿಲ್ಲೆಯಲ್ಲಿ, ಮೂಡಿಗೆರೆ ಅಭಿವೃದ್ಧಿಗಾಗಿ ದುಡಿದಿದ್ದಾರೆ.

ನನ್ನ ತಂದೆ ನಿಧನರಾದಾಗ ನಾವೆಲ್ಲ ದುಃಖತಪ್ತರಾಗಿದ್ದೆವು. ಅವರು ನಮಗೆ ಧೈರ್ಯ ತುಂಬಿದರು. ಅಳುವವರು ಹೇಡಿಗಳು. ಸುಮ್ಮನೆ ಕೂತರೆ ಕೆಲಸವಾಗುವುದಿಲ್ಲ. ಅವರ ಆದರ್ಶದಂತೆ ನಡೆಯಬೇಕು ಎಂದು ನಮ್ಮನ್ನು ಎಚ್ಚರಿಸಿ ಧೈರ್ಯ ತುಂಬಿದರು. ನನ್ನ ರಾಜಕಾರಣದ ಏಳಿಗೆಯಲ್ಲಿ ಬೈರೇಗೌಡರ ಪಾತ್ರ ಅತಿ ಮುಖ್ಯವಾದದ್ದು. ಅವರು ನಮ್ಮ ಜಿಲ್ಲೆಯ ಒಬ್ಬ ಅಪರೂಪದ ಗಣ್ಯ ಮಹನೀಯರು ಹಾಗೂ ರಾಜಕಾರಣಿಗಳು.

# ಆದರ್ಶ ವ್ಯಕ್ತಿ ಕೈಕುರೆ ರಾಮಣ್ಣ ಗೌಡ

✍ ವೆಂಕಟ್ರಮಣ ಗೌಡ ಕೈಕುರೆ



ಹಿರಿಯರೂ ಗೌರವಾನ್ವಿತರೂ ಸಹೃದಯರೂ ಜನಾನುರಾಗಿಯೂ ಕೊಡುಗೈ ದಾನಿಗಳೂ ಆಗಿರುವ. ಶ್ರೀ ಕೈಕುರೆ ರಾಮಣ್ಣ ಗೌಡರು ಈ ಊರಿನ ಮಾತ್ರವಲ್ಲ ಒಬ್ಬ ಹಿರಿಯ ಹಿತೈಷಿಯನ್ನು, ಸರ್ವರ ಕಷ್ಟ ಕಾರ್ಪಣ್ಯಗಳಿಗೆ ಸ್ಪಂದಿಸುತ್ತಿದ್ದ ಅನುಕಂಪಶೀಲರು. ಇವರು ದೇವರಿಗೆ ಹೂವಾಗಿ, ಭೂಮಿಗೆ ಹಣ್ಣಾಗಿ ಪ್ರಕೃತಿಗೆ ನೀರೆರೆದವರು, ನಮ್ಮನ್ನೆಲ್ಲಾ ಚಿಗುರಿಸಿ ಬೆಳೆಸಿದವರು.

ತಾನು ಹುಟ್ಟಿ ಬೆಳೆದ ಪರಿಸರದ ಧಾರ್ಮಿಕ ಸಾಮಾಜಿಕ ಶೈಕ್ಷಣಿಕ ಕ್ಷೇತ್ರಗಳ ಅಭಿವೃದ್ಧಿಗೆ ಅವಿರತ ದುಡಿದು ಅಪಾರ ಕೊಡುಗೆ ನೀಡಿದವರು. ಕಷ್ಟಪಟ್ಟು ಕೂಡಿಸಿದವರು ಹೊರತು ಕೆಟ್ಟದ್ದರಲ್ಲಿ ಕಳೆದವರಲ್ಲ.

ಬಡತನದ ಹಿನ್ನೆಲೆಯಿಂದ ಕಠಿಣ ಪರಿಶ್ರಮದ ಮೂಲಕ ಗುತ್ತಿಗೆದಾರನಾಗಿ ಕುಟುಂಬಕ್ಕೆ ಭದ್ರ ಬುನಾದಿ ಹಾಕಿ ಕೊಟ್ಟ, ಹಿರಿಯ ಚೇತನ ಕೈಕುರೆ ಚಲ್ಲ ಗೌಡ ತಿಮ್ಮಕ್ಕ ದಂಪತಿಗಳ ಹಿರಿಯ ಪುತ್ರನಾಗಿ ಪುತ್ತೂರು ತಾಲೂಕಿನ ಕೋಣಾಜೆ ಗ್ರಾಮದ ಮುಜ್ರೋಡಿ ಎಂಬಲ್ಲಿ ರಾಮಣ್ಣ ಗೌಡರ ಜನನ. ಕಡಬ, ಮರ್ದಾಳಗಳಲ್ಲಿ ಪ್ರಾಥಮಿಕ ಶಿಕ್ಷಣ. ಸೌಲಭ್ಯಗಳ ಕೊರತೆಯಿಂದಾಗಿ ವಿದ್ಯೆ ಮುಂದುವರಿಸಲಾಗದೆ ಕುಟುಂಬದ ಹೊರೆ ಹೊರಲು ಆರಂಭ. ಜೀವನದ ವಿದ್ಯಾಲಯದಲ್ಲಿ ಬಹಳಷ್ಟು ಕಲಿತು ವಿಷಯ ಕುತೂಹಲಿಗಳಾಗಿ ಅನುಭವದಲ್ಲಿ ಮಾಗಿದವರು. ಹಿರಿಯರು ತೋರಿದ ದಾರಿಯಲ್ಲಿ ಶ್ರಮಿಸಿ, ಪಿ.ಡಬ್ಲ್ಯೂ.ಡಿ.ಯ 'ಎ' ಶ್ರೇಣಿಯ ಗುತ್ತಿಗೆದಾರರಾದರು. ಮಂಗಳೂರು-ಬೆಂಗಳೂರು ರಾಷ್ಟ್ರೀಯ ಹೆದ್ದಾರಿಯಲ್ಲಿ ಭದ್ರವಾದ ಸೇತುವೆಗಳನ್ನು ತಿರುವಿನಲ್ಲೂ ಸುಂದರವಾಗಿ ನಿರ್ಮಿಸಿದ ಶ್ರೀ ಚಲ್ಲ ಗೌಡರಂತೆ ತಾನೂ ಅದೇ ಕಾಮಗಾರಿಯನ್ನು ಮುಂದುವರಿಸಿದರು. ಗುಣಮಟ್ಟದಲ್ಲಿ ಕೊರತೆ ಮಾಡದೆ ಲಾಭಕ್ಕಾಗಿ ಹಾತೊರೆಯದೆ, ಪ್ರಾಮಾಣಿಕತೆಯಿಂದ ಕೈಗೆತ್ತಿದ ಕೆಲಸ ನಿರ್ವಹಿಸಿ ಉತ್ತಮ ಹೆಸರನ್ನು ಸಂಪಾದಿಸಿದರು. ಉತ್ತಮವಾದ ಶತ ಶತಮಾನಗಳಷ್ಟು ಬಾಳುವ ಸೇತುವ ನಿರ್ಮಿಸಿ ರಾಷ್ಟ್ರಕ್ಕೆ ಅರ್ಪಿಸಿದರು. ಸುಳ್ಯ ತಾಲೂಕಿನ ಆಲೆಟ್ಟಿ, ಹರಿಹರ-ಪಲ್ಲತ್ತಡ್ಕ, ಬಾಳುಗೋಡು ಸೇತುವೆಗಳು ಇವರ ದಕ್ಷತೆಗೆ ಸಾಕ್ಷಿಯಾಗಿವೆ. ಆಲೆಟ್ಟಿ ಸೇತುವೆಯನ್ನು ಸುಂದರ ಮತ್ತು ಭದ್ರವಾಗಿ ಕಟ್ಟಿದುದಕ್ಕೆ ಆಗಿನ ಮುಖ್ಯಮಂತ್ರಿ ಶ್ರೀ ವೀರೇಂದ್ರ ಪಾಟೀಲರ ಮುಕ್ತ ಪ್ರಶಂಸೆಯನ್ನೂ, ಚಿನ್ನದ ಪದಕವನ್ನೂ ಪಡೆದ ಅದ್ವಿತೀಯ ಸಮಾಜಬಾಂಧವರಾಗಿದ್ದಾರೆ.

ಲಾರಿಗಳ ಸಮೂಹವನ್ನು ಹೊಂದಿದ್ದ ಇವರಿಂದ ನೂರಾರು ಮಂದಿ ಉದ್ಯೋಗ ಪಡೆದರು. ಮಫತ್‌ಲಾಲ್ ಕಂಪೆನಿಯಂತಹ ಬೃಹತ್ ಉದ್ದಿಮೆಗಳು ಇವರನ್ನೇ ಆಶ್ರಯಿಸುವಷ್ಟು ಪ್ರಸಿದ್ಧವಾದ ಟ್ರಾನ್ಸ್‌ಪೋರ್ಟ್ ಕಂಟ್ರಾಕ್ಟರ್ ರಾದರು. ಹಳ್ಳಿಯ ಮುಗ್ಧನೊಬ್ಬ ಇಷ್ಟು ಎತ್ತರಕ್ಕೆ ಏರಬೇಕಾದಲ್ಲಿ ಅವರಲ್ಲಿರಬಹುದಾಗಿದ್ದ ದೂರದೃಷ್ಟಿ, ಕರ್ತವ್ಯನಿಷ್ಠೆ, ಪರಿಶ್ರಮ ಅಸಾಮಾನ್ಯವೆಂದು ಅರಿವಾಗುವುದು.

ಊರಿನ ಶಾಲೆ, ದೇಗುಲಗಳೇ ಶಾಂತಿ ಮತ್ತು ಸಮೃದ್ಧಿಯ ಕೇಂದ್ರ ಬಿಂದುಗಳು ಎಂದು ಅರಿತಿದ್ದ ಶ್ರೀ ಕೈಕುರೆ ರಾಮಣ್ಣ ಗೌಡರು ದೇಣಿಗೆ ನೀಡಿದ ಯಾ ಸ್ವತಹ ಅಭಿವೃದ್ಧಿಗೊಳಿಸಿದ ಶಾಲೆ ದೇವಾಲಯಗಳು ಒಂದೆರಡಲ್ಲ. ಹೆಸರಿಸಬಹುದಾದ ಕೆಲವೆಂದರೆ ಶೀರಾಡಿ ಗಡಿ ರೆಕ್ಯ ದೇವಸ್ಥಾನ, ಮರ್ದಾಳ ಮಹಾಲಿಂಗೇಶ್ವರ ದೇವಸ್ಥಾನ, ಕೊಂಬಾರು ಪಂಚಲಿಂಗೇಶ್ವರ ದೇವಸ್ಥಾನ, ಉಳ್ಳಾಕುಲು ಸಿದ್ದಪ್ಪ ದೈವ. ಬಚ್ಚನಾಯಕನ ಗುಡಿಗಳು, ಗುಡ್ರಾದಿಯ (ರೆಖ್ಯಾ) ಗುಡ್ರಾ ಮಲ್ಲೇಶ್ವರ ದೇವಾಲಯದ ಪುನಃನಿರ್ಮಾಣ, ಆಡೆಂಜ ಪಂಚಲಿಂಗೇಶ್ವರ ದೇವಸ್ಥಾನ, ಶ್ರೀ ಗೋಪಾಲಕೃಷ್ಣ ದೇವಸ್ಥಾನ ಬಿಳಿನೆಲೆ, ಐತ್ತೂರಿನ ಶಿರಾಡಿ ದೈವದ ಗುಡಿ, ಎಡಮಂಗಲ ಮರೋಳಿ ದೇವಸ್ಥಾನ, ಕಡಿರುದ್ಯಾವರ ಶ್ರೀ ವೆಂಕಟ್ರಮಣ ದೇವಸ್ಥಾನ ಮುಂತಾದ ಅನೇಕ ದೇವಾಲಯಗಳು ಇವರ ನೆರವಿನ ಹಸ್ತದಿಂದ ಜನರ ಭಕ್ತಿಯ ಕೇಂದ್ರಗಳಾಗಿ ಮಾರ್ಪಟ್ಟಿವೆ. ರಾಷ್ಟ್ರೀಯ ಹೆದ್ದಾರಿಯಲ್ಲಿ ದಿನವಹಿ ಪ್ರಯಾಣಿಸುವ ಸಾವಿರಾರು ಪ್ರಯಾಣಿಕರ ನೂರಾರು ವಾಹನಗಳ ಸುರಕ್ಷತೆಗೆ ಪ್ರಾರ್ಥಿಸುವ ಗುಂಡ್ಯಂಗಡಿ ಚೌಡೇಶ್ವರಿ ದೇವಸ್ಥಾನ ನಿರ್ಮಿಸಿ ಬ್ರಹ್ಮಕಲಶ ವಿಜೃಂಭಣೆಯಿಂದ ನಡೆಸಿದರು.

ಐತೂರಿನ ನೇಲಡ್ಕ ಶಾಲೆ, ಕಡಬ ಪ್ರೌಢಶಾಲೆ, ರಾಮಕುಂಜ ಪ್ರೌಢಶಾಲೆ, ಬಿಳಿನೆಲೆ ಗೋಪಾಲಕೃಷ್ಣ ಪ್ರೌಢಶಾಲೆ ಮುಂತಾದ ಗ್ರಾಮೀಣ ಪ್ರದೇಶದ ಶಾಲೆಗಳಿಗೆ ಹೊಸ ಕೊಠಡಿಗಳನ್ನು ನಿರ್ಮಿಸಿಕೊಟ್ಟರು. ಬಡವರ ಮೇಲಿನ ಅಪಾರವಾದ ಪ್ರೀತಿ ಅವರ ಸಂಕಷ್ಟಕ್ಕೆ ಸದಾ ನೆರವಾಗುವ ಮೂಲಕ ವ್ಯಕ್ತವಾಗುತ್ತಿತ್ತು. ಹಸಿದು ಬಂದವನಿಗೆ ಮೃಷ್ಟಾನ್ನವನ್ನೇ ನೀಡುವ ಮನೋಭಾವ ಇವರದಾಗಿತ್ತು. ಮಂಗಳೂರಿನ ಗೌಡ ಸಮಾಜದವರು ನಿರ್ಮಿಸಿದ ಕಲ್ಯಾಣಮಂಟಪಕ್ಕೆ, ಬೆಳ್ತಂಗಡಿ, ಕಡಬ ಕಲ್ಯಾಣ ಮಂಟಪಗಳಿಗೆ, ಶ್ರೀ ಆದಿಚುಂಚನಗಿರಿ ಕ್ಷೇತ್ರಕ್ಕೆ ಹೀಗೆ ಲಕ್ಷಾಂತರ ರೂಪಾಯಿಗಳನ್ನು ಸತ್ಕಾರ್ಯಕ್ಕೆ ದಾನ ಮಾಡಿ ಪ್ರಚಾರ ಪಡೆಯದೆ ಪ್ರತಿಫಲಾಪೇಕ್ಷೆ ಇಲ್ಲದೆ ಗೀತೆಯಲ್ಲಿ ಹೇಳಿದ

'ಕರ್ಮಣ್ಯೇವಾಧಿಕಾರಸ್ತೇ ಮಾ ಫಲೇಷು ಕದಾಚನ' ಎಂಬಂತೆ ನಡೆದು ಬಂದವರು. ಪ್ರಚಾರಕ್ಕಾಗಿ ದಾನ ಮಾಡುವವರು, ವೇದಿಕೆಯಲ್ಲೇ ಘೋಷಿಸುವವರು ಇರುವ ಕಾಲದಲ್ಲಿ ರಾಮಣ್ಣ ಗೌಡರು ಬಲಗೈಯಲ್ಲಿ ನೀಡಿದ್ದು ಎಡಗೈಗೆ ತಿಳಿಯದಷ್ಟು ಸದ್ದಿಲ್ಲದೆ, ಪ್ರಚಾರದ ಅಬ್ಬರವಿಲ್ಲದೆ ಕೃತಿಯ ಮೂಲಕ ಹೃದಯ ವೈಶಾಲ್ಯ ತೋರಿದವರು. ಅನೇಕರಿಗೆ ಸಹಾಯ ಮಾಡಿದ ಇವರು ಜಾತಿವಾದಿಯಾಗಿರಲಿಲ್ಲ; ಬಡವರ ಪಕ್ಷಪಾತಿಯಾಗಿದ್ದರು. ರಾಜಕೀಯದಲ್ಲಿ ಅನೇಕರು ಇವರ ಪ್ರಯೋಜನ ಪಡೆದಿದ್ದರೂ ಇವರೆಂದೂ ಅಧಿಕಾರದ ಆಶೆ ಪಟ್ಟವರಲ್ಲ.

ಒಬ್ಬ ಆದರ್ಶ ಕೃಷಿಕರಾಗಿ ಕುಕ್ಕುಂಜೆ, ಬೆಳಾಲು, ಉಪ್ಪಿನಂಗಡಿಗಳಲ್ಲಿ ಸುಂದರ ತೋಟಗಳನ್ನು ಬೆಳೆಸಿದರು. ಇವರ ಸಹೋದರರಾದ ಕುಶಾಲಪ್ಪ ಗೌಡ, ನಾಗಣ್ಣ ಗೌಡ, ಬಾಬುಗೌಡ ಸಹೋದರಿಯರುಗಳಾದ ನಾಗವೇಣಿ ಕೇಶವ, ಮೋಹನಾಂಗಿ ಶಿವರಾಮ, ಪತ್ನಿ ಚಂದ್ರಾವತಿ, ಮಕ್ಕಳಾದ ವೆಂಕಟ್ರಮಣ, ಮಂಜುನಾಥ, ಸುಬ್ರಹ್ಮಣ್ಯ ಮಗಳು ಮೋಹಿನಿ ದಿನೇಶ್ ಕೂಜುಗೋಟು ಕಟ್ಟೆಮನೆ ಇವರೆಲ್ಲರ ಬಾಳಿಗೆ ಉಜ್ವಲಿಸುವ ತಾರೆ, ಪ್ರಜ್ವಲಿಸುವ ದೀಪವಾಗಿದ್ದಾರೆ.

ಇವರ ವ್ಯಕ್ತಿತ್ವ ನಾರಿಕೇಳ ಪಾಕ - ಹೊರಗೆ ಒರಟೆನಿಸಿದರೂ ಮೃದು ಮಧುರ ಸ್ವಭಾವ. ಇಂತಹ ಒಬ್ಬ ಸಜ್ಜನ ದಾನಿಯನ್ನು ನಾವು ಕಳಕೊಂಡಿದ್ದೇವೆ. ಜಗಜ್ಯೋತಿ ಬಸವಣ್ಣನವರು ಹೇಳಿದ 'ಇಲ್ಲಿ ಸಲ್ಲುವವರು ಅಲ್ಲಿಯೂ ಸಲ್ಲುವರಯ್ಯಾ' ಎಂಬ ದಿವ್ಯ ನುಡಿಯಲ್ಲಿ ನಮಗೆ ನಂಬಿಕೆ ಇದೆ. ಅವರಿಗೆ ಉತ್ತಮವಾದ ಸ್ಥಾನ ಸ್ವರ್ಗದಲ್ಲೂ, ಚಿರಸನೆಪು ಸ್ಥಿರಸ್ಥಾಯಿಯಾಗಿ ಪ್ರತಿಯೊಬ್ಬನ ಹೃದಯದಲ್ಲೂ ಮನೆ ಮಾಡಲಿ ಎಂದು ಆಶಿಸುತ್ತೇವೆ. ●

# ಕನಸು

ಶತಶತಮಾನಗಳನಳೆದಳೆದಿನ್ನೂ ಉಳಿದಿರುವ
ಈ ಬೇತಾಳ
ಆಲ ನೆಲ ಬಾನಿನಲಿ ಕೊಂಬೆ ರೆಂಬೆಯ ಬಾಚಿ
ಹರಿಬಿಟ್ಟ ಹಳೆಯ ಜಡೆಬೇರುಗಳ ಜತೆ ಸಿಡಿದ
ಕಿರು ಬೀಜಕ್ಕೂ ಪುಟಿನೆಗೆದು
ಚಿಗುರಿ ಬೆಳೆಯುವ ಆಸೆ
ಸಸಿಯಾಗುವ - ಬಲಿತು ಮರೂಗುವ
ಕೊಂಬೆ ರೆಂಬೆಗಳಿಂದ ಹಚ್ಚಹಸುರಿನ ಹೊಸತನ ತುಂಬಿ
ತಲೆಯೆತ್ತಿ ಬೆಳೆಯುವಾಸೆ
ಹೊಸ ಗಾಳಿಗೆ ಕಿವಿದುಂಬಿ ತಲೆದೂಗುವಾಸೆ
ಕಾಲಕೊಪ್ಪುವ ಕಾಯಿ ಹೂ ಹಣ್ಣುಗಳ ಹೊತ್ತು
ಮರಳಿ ಮಣ್ಣಿಗೆ ಮತ್ತೆ
ಮರವಾಗುವಾಸೆ
ಆದರೆ....
ಈ ಆಲ ಬೇತಾಳ ಬೇರುಗಳ ನಿತ್ಯ ಕಡಿಯುವ ಪಂಜರದ ಮರಿಗಿಳಿಗೆ
ಹಗಲೆಲ್ಲ ಕನಸು

✍ ಟಿ.ಜಿ. ಮುಡೂರು

# ವೈಜ್ಞಾನಿಕ ಕವಿ ಚಿದಾನಂದಣ್ಣ

✍ ಪ್ರೊ. ಶೀಲಾವತಿ ಕೆ.



ನಮ್ಮ ಅಣ್ಣನ ಕುರಿತು ಒಂದೆರಡು ನುಡಿಗಳನ್ನು ಬರೆಯಲು ಸಂತಸಪಡುತ್ತೇನೆ, ಹೆಮ್ಮೆ ಪಡುತ್ತೇನೆ. ಬಾಲ್ಯದಿಂದಲೂ ಅಣ್ಣನಿಗೆ ಓದು, ಬರಹಗಳಲ್ಲಿ ಬಹಳ ಶ್ರದ್ಧೆ, ಆಸಕ್ತಿ. ಮಕ್ಕಳ ವ್ಯಾಸಂಗದ ಅಭಿರುಚಿಗೆ ಅನುಕೂಲವಾಗುವಂತೆ ಉತ್ತಮ ಪುಸ್ತಕಗಳ ಸಂಗ್ರಹ ನಮ್ಮ ತಂದೆ ದಿ.ಕೊಳಂಬೆ ಪುಟ್ಟಣ್ಣಗೌಡರವರಲ್ಲಿತ್ತು. ಅವರ ಮೇಜಿನ ಮೇಲೆ ಯಾವಾಗಲೂ ಕಿಟ್ಟೆಲ್ ಶಬ್ದಕೋಶ, ಹಿರಿಯ ಕವಿಗಳ ಕೆಲವು ಕಾವ್ಯಗಳಿರುತ್ತಿದ್ದವು. ಬೆಳಗ್ಗೆ ಬೇಗನೆ ಏಳುವ, ನಿತ್ಯವಿಧಿಗಳನ್ನು ಮುಗಿಸಿ ಅಧ್ಯಯನದಲ್ಲಿ ತೊಡಗುವ ಉತ್ತಮ ಅಭ್ಯಾಸ ನಮ್ಮ ಅಣ್ಣನಿಗೆ ಚಿಕ್ಕಂದಿನಿಂದಲೂ ರೂಢಿಯಾಗಿತ್ತು. ಆಗಿನ ದಿನಗಳಲ್ಲಿ ಹೆಚ್ಚು ಪ್ರಚಲಿತವಾಗಿದ್ದ ವಿಜಯ ಮೂಲ, ಕಥಾವಳಿ, ನಗುವನಂದ, ಜನಪ್ರಗತಿ, ರಾಷ್ಟ್ರಬಂಧು ಮುಂತಾದ ಪತ್ರಿಕೆಗಳು ನಮ್ಮ ಮನೆಗೆ ಬರುತ್ತಿದ್ದುವು. ಅವುಗಳನ್ನು ಓದಿ ಆನಂದಿಸುವುದು ಮಾತ್ರವಲ್ಲ, ಸಣ್ಣಕತೆ, ಕವನ, ನಗೆಬರಹಗಳನ್ನು ರಚಿಸುವ ಗೀಳು ಅವರಿಗಿತ್ತು. ಅವುಗಳಲ್ಲಿ ಕೆಲವು ಕತೆ, ಕವನಗಳು ಪತ್ರಿಕೆಗಳಲ್ಲಿ ಪ್ರಕಟವಾಗಿದ್ದುವು. ಇನ್ನು ಕೆಲವು ಧಾರಾವಾಹಿ ಕತೆಗಳು ಜನಪ್ರಗತಿ, ವಿಜಯಮೂಲ ಪತ್ರಿಕೆಗಳಲ್ಲಿ ಬೆಳಕು ಕಂಡಿದ್ದವು. ತರಗತಿಗಳಲ್ಲಿ ಸಾಮಾನ್ಯವಾಗಿ ಕನ್ನಡ ವಿಷಯದಲ್ಲಿ ಉತ್ತಮ ಅಂಕಗಳು ಅವರಿಗೆ ದೊರಕುತ್ತಿದ್ದವು. ದೊಡ್ಡವನಾದ ಮೇಲೆ ಕನ್ನಡದಲ್ಲಿ ಸ್ನಾತಕೋತ್ತರ ಪದವಿ ಪಡೆಯಬೇಕೆಂಬ ಹೆಬ್ಬಯಕೆ ಅವರದಾಗಿತ್ತು. ಗಣಿತ, ವಿಜ್ಞಾನಗಳಲ್ಲಿ ಅತ್ಯಧಿಕ ಅಂಕಗಳನ್ನು ಗಳಿಸಿದ ಕಾರಣ ಮುಂದೆ ಇಂಜಿನಿಯರಿಂಗ್ ಕಾಲೇಜಿಗೆ ಸೇರುವ ಸೌಲಭ್ಯ ದೊರಕಿತು. ಆದರೆ ಅವರ ಮನದಾಳದಲ್ಲಿ ಕನ್ನಡದ ಒಲವು ಕುಂದಿರಲಿಲ್ಲ. ಸಾಹಿತ್ಯ ರಚನೆ ಮುಂದುವರಿಯುತ್ತಿತ್ತು. ಇಂಜಿನಿಯರಿಂಗ್ ಪದವೀಧರಾದರು. ಮುಂದೆ ಇಂಜಿನಿಯರ್ ಹುದ್ದೆ ಅನಾಯಾಸವಾಗಿ ಲಭಿಸಿತು. ಆದರೆ ಅದನ್ನು ಬಿಟ್ಟು ಅಧ್ಯಾಪಕ ವೃತ್ತಿಯನ್ನು ಆಯ್ದುಕೊಂಡರು. ಹೀಗೆ ಬಯಸಿದ್ದು ಒಂದು ಆದದ್ದು ಬೇರೊಂದು. ಆದರೆ, ಆದದ್ದೆಲ್ಲ ಒಳಿತೇ ಆಯಿತು. ಇದೀಗ ಕುವೆಂಪು ವಿಶ್ವವಿದ್ಯಾನಿಲಯದ ಉಪಕುಲಪತಿಯಾಗಿ ಆಡಳಿತ ನಡೆಸುವ ಯೋಗವೂ ಒದಗಿ ಬಂತು.

ನಮ್ಮ ಚಿದಾನಂದಣ್ಣ ಸಾಹಿತ್ಯ, ವಿಜ್ಞಾನಗಳೆರಡನ್ನೂ ಮೇಳವಿಸಿ ಕೃತಿರಚನೆಗೆ ತೊಡಗಿದರು. ವಿಜ್ಞಾನವೂ ಸಾಹಿತ್ಯವಾಗುವ ರೀತಿಯನ್ನು ತನ್ನ ಕಾವ್ಯದಿಂದ ತೋರಿಸಿ ಕೊಟ್ಟರು. "ಇಂಜಿನಿಯರಿಂಗ್ ಗೀತೆಗಳು" ಈ ಬಗೆಯ ಕೃತಿ ಇದರಲ್ಲಿ ಸರ್ ಎಂ. ವಿಶ್ವೇಶ್ವರಯ್ಯನವರನ್ನು ಕುರಿತು ಬರೆದ ಅರ್ಪಣ ಪದ್ಯ ಅತ್ಯಂತ ಕಡಿಮೆ ಶಬ್ದಗಳಲ್ಲಿ ಅತ್ಯಧಿಕ ಅರ್ಥವನ್ನು ಒಳಗೊಂಡಿದೆ. ಈ ಸಂಕಲನದ ಕವನಗಳು ಕವಿ ಹೇಳಿಕೊಳ್ಳುವಂತೆ ಮೃಣ್ಮಯ ವಾಸನೆಯಿಂದ ಚಿನ್ಮಯ ಉಪಾಸನೆಯವರೆಗೆ ಹರಡಿದೆ. ಶಿವ, ರಾಮ, ಕೃಷ್ಣರಿಗೂ ದೀಪ್ತಿಯನ್ನು ತಂದ ವಿದ್ಯುದ್ದೇವತೆಯ ಶಕ್ತಿಯನ್ನು ಅನುಭವಿಸಿದ ಕವಿ ಅದನ್ನು ಕಲಿಯುಗದ ಕಲ್ಕಿಯೆಂದು ವಂದಿಸುತ್ತಾರೆ. ಈ ಕವನ ಸಂಗ್ರಹದ ಪದ್ಯಗಳ ವಸ್ತುವ್ಯಾಪ್ತಿ ದೊಡ್ಡದು. ಪರಮಾಣುವಿನ ಎಲೆಕ್ಟ್ರಾನ್ ಮತ್ತು ಭಗವಂತನ ಗುಣಲಕ್ಷಣ ಸಾಮ್ಯಗಳು, ವಿದ್ಯುತ್ ಮತ್ತು ವಿದ್ವತ್ತುಗಳ ನಡುವಿನ ಹೋಲಿಕೆ, ಮಾನವನಿಗೆ ಧರ್ಮ ಮತ್ತು ವಿಜ್ಞಾನಗಳೆರಡರ ಅವಶ್ಯಕತೆ, ಭಸ್ಮಾಸುರನನ್ನು ಹೋಲುವ ಅಣುಶಕ್ತಿ, ಇರುವೆ-ಸೇತುವೆ, ವಾಸ್ತು ಶಿಲ್ಪಿ ಜೇನುಹುಳ, ಇಂಜಿನಿಯರಿಂಗ್ ಧರ್ಮ ಮುಂತಾದ ವಿಷಯದ ವಸ್ತು ಪದ್ಯಗಳ ಹೂರಣವಾಗಿರುತ್ತದೆ.

"ವಿಶ್ವನಿರ್ಮಾಪಕನು ಕಣ್ಗೆಂದು ಕಾಣಿಸನು, ಕವಚ ಚಿತ್ತಕ ಭೇದ್ಯ, ಶುದ್ಧ ಚಿತ್ತಕೆ ವೇದ್ಯ ಆಗ ತನುವೆಲ್ಲ "ವಿದ್ಯುತ್ಸಂಚಾರ" ಈ ಸಾಲುಗಳಲ್ಲಿನ ಅಧ್ಯಾತ್ಮ ದೃಷ್ಟಿ, ದುಡಿಯುವವರು ಎಂಬಲ್ಲಿನ ಸ್ವಭಾವೋಕ್ತಿ ಉಲ್ಲೇಖನೀಯ "ಧರ್ಮಯುದ್ಧಗಳಿಲ್ಲ, ಜಾತಿ ಭೇದಗಳಿಲ್ಲ ಧರ್ಮಾಂಧತೆಗೆ ಎಡೆಯೆ ಇಲ್ಲ" ಇದರಲ್ಲಿ ಕಾಣುವ ಸಾಮಾಜಿಕ ನೀತಿ ಜಲಪಾತ ಕವನದಲ್ಲಿನ ವಿದ್ಯುತ್ ವಿದ್ವತ್ತುಗಳಲ್ಲಿರುವ ಸಾಮ್ಯದಲ್ಲಿ ಹೊಸತನ ಮತ್ತು ಹೊಳಹುಗಳಿವೆ.

ಈ ಸಂಕಲದನದಲ್ಲಿ ಹೊಸಗನ್ನಡದೊಂದಿಗೆ ಹಳಗನ್ನಡ, ನಡುಗನ್ನಡ ರೂಪಗಳು ಸೇರಿಕೊಂಡು ಕವಿತೆಯ ರಸಪ್ರವಾಹಕ್ಕೆ ಕೆಲವೊಮ್ಮೆ ಭಂಗವುಂಟಾಗುವುದುಂಟು. ಕೇವಲ ಹೊಸಗನ್ನಡದಲ್ಲಿಯೇ ಬರೆದರೆ ಚೆನ್ನಾಗಿತ್ತು ಎನಿಸುತ್ತದೆ.

ಇಂಜಿನಿಯರಿಂಗ್ ಗೀತೆಗಳು ಇನ್ನೂ ಹೆಚ್ಚಿನ ಪ್ರಗತಿ ಹೊಂದಿ ಭಾಷಾ ಪ್ರಭುತ್ವವನ್ನು ಪಡೆದು ವಚನ ಶಾರದೆಯ ರೂಪದಲ್ಲಿ ಹೊರಹೊಮ್ಮಿದೆ. ವಿಜ್ಞಾನದ ಅತ್ಯುತ್ತಮವಾದ ಸಾಧನಗಳನ್ನು ಸರಳವಾಗಿ ಹೇಳುವ ಕಲೆ "ವಿಜ್ಞಾನ ವಚನಗಳು" ಕೃತಿಯಲ್ಲಿ ಸಿದ್ಧಿಸಿದೆ. ಲೋಕಾನುಭವ, ಅನುಭಾವಗಳು ಇಲ್ಲಿ ಕೆನೆಗಟ್ಟಿರುವುದನ್ನು ಕಾಣಬಹುದು. ಸಮರ್ಪಣ ಭಾವದ ತಂತುವಿನೊಂದಿಗೆ ವಿಶ್ವ ತತ್ವ, ದೇವಶಕ್ತಿ, ಆದಿ ಮೂಲದ ಹುಡುಕಾಟವನ್ನು ವಿಜ್ಞಾನಿ ಕವಿ ಇಲ್ಲಿ ಮುಂದುವರಿಸಿರುವರು. ವಿಜ್ಞಾನ ಮಾರ್ಗದಲ್ಲಿ ಪಡೆದ ಆಧ್ಯಾತ್ಮ ಜ್ಞಾನವನ್ನು ನೀತಿ ರೀತಿ, ವಿಶ್ವಾಂ ಸಚಲ, ಕಲೆಗಾರ, ಹುಳ-ಮಳೆ ಮುಂತಾದ ಕವನಗಳು ವಿಶದಪಡಿಸುತ್ತವೆ. ಇದರಲ್ಲಿ ಬರುವ "ಸಂತೋಷ ಕನ್ಯೆ ಅದೃಶ್ಯ

ಕನ್ಯೆಯಾಗಿಯೇ ಉಳಿದಳು" "ದೂರದ ಚಂದ್ರನತ್ತ ಭೂದೇವಿ ಮುತ್ತುಗುಳ್ಳೆ ಊದಿದಳು. ದೂರದೂರಿನ ಸೂರ್ಯ ಅಡಿಗೆ ಕೆಲಸಕೆ ಬಂದ, ಆದರೆ ದೇಶ ದೇಶಗಳು ದೂರ ದೂರ ಸರಿದುವು" ಈ ಬಗೆಯ ಸಾಲುಗಳು ಧ್ವನಿಪೂರ್ಣವಾಗಿವೆ.

ಒಟ್ಟಿನಲ್ಲಿ ತಾತ್ವಿಕತೆ, ಕಾಲ್ಪನಿಕತೆ, ಸತ್ಯಗಳ ಮಿಶ್ರಣ ಈ ವಚನಗಳ ಹೂರಣ. ಇವನ್ನು ಓದಿದಂತೆಲ್ಲಾ "ಮಿಥ್ಯವನೊರಸಿ ಸತ್ಯಾಂಶ ಮರೆಸುವುದು, ಬುರುಡೆಯನ್ನೊರಸಿ ವಿದ್ಯುದ್ದೀಪ ಉರಿಸಿದಂತಾಯ್ತು ಮಂತ್ರ ವಿಜ್ಞಾನಿ ಯಂತ್ರ ಧ್ಯಾನಿ ಸಚ್ಚಿದಾನಂದ" ಎಂದು ಹೇಳಬೇಕೆನ್ನಿಸುತ್ತದೆ.

ಪ್ರೌಢರಿಗಾಗಿ ಬರೆದ ಕೃತಿಗಳು ಇಂಜಿನಿಯರಿಂಗ್ ಗೀತೆಗಳು ಮತ್ತು ವಿಜ್ಞಾನ ವಚನಗಳು ಕವನ ಸಂಗ್ರಹಗಳಿಗೆ ಬಲ್ಲವರಿಂದ ದೊರೆತ ಮೆಚ್ಚುಗೆಯ ವಿಮರ್ಶೆಗಳು ಮುಂದೆ ಮಕ್ಕಳಿಗಾಗಿ ಕಿರುಪದ್ಯಗಳ ರಚನೆಗೆ ಪ್ರೇರಣೆಗಳು ಎನ್ನುತ್ತಾರೆ ಕವಿ. "ಪುಟಾಣಿಗಳ ವಿಜ್ಞಾನ ಪದ್ಯಗಳು" ಪುಟ್ಟ ಮಕ್ಕಳಿಗಾಗಿ ಬರೆದ ಶಿಶು ಸಾಹಿತ್ಯ ಇದರಲ್ಲಿರುವ ಹೆಚ್ಚಿನ ಪದ್ಯಗಳಲ್ಲಿ ವಿಜ್ಞಾನಕ್ಕೆ ಸಂಬಂಧಿಸಿದ ವಿಷಯಗಳ ಸುಲಭರೂಪದಲ್ಲಿವೆ. ಭೂಮಿತಾಯಿ, ಕಡಲು, ಸೂರ್ಯದೇವ, ಚಂದಿರಮಾಮ ಮುಂತಾದವು ಈ ಸಾಲಿಗೆ ಸೇರಿದವು.

"ತೋರಣವಿಲ್ಲದೆ ಹಬ್ಬವಿಲ್ಲ, ಓರಣವಿಲ್ಲದೆ ಒಪ್ಪವಿಲ್ಲ" ಎನ್ನುತ್ತಾರೆ ಹಿರಿಯ ಕವಿ ಎಸ್.ವಿ.ಪರಮೇಶ್ವರ ಭಟ್. ಹೌದು ಚೆಲುವೇ ಹಬ್ಬ, ಕ್ರಮವೇ ಸೌಂದರ್ಯ. ನಮ್ಮ ಕವಿ ಅಣ್ಣನವರು ಮಾಡುವ ಎಲ್ಲಾ ಕೆಲಸಗಳಲ್ಲಿಯೂ ಒಪ್ಪ ಓರಣ ಎದ್ದು ಕಾಣಿಸುತ್ತದೆ. ಅವರ ಯಶಸ್ಸಿಗೆ ಮುಖ್ಯವಾದ ಕಾರಣಗಳಲ್ಲಿ ಇದೂ ಒಂದಾಗಿದೆ. ಇನ್ನೊಂದು ಸಮಯ ಪ್ರಜ್ಞೆ. ಪ್ರಯಾಣ ಮಾಡುವ ವೇಳೆಯಲ್ಲಿಯೂ ಅವರ ಕೈಯಲ್ಲಿ ಒಂದು ಪುಸ್ತಕ ಸದಾ ಇರುತ್ತದೆ.

ಹಿರಿಯರಲ್ಲಿ ಗೌರವ, ಕಿರಿಯರಲ್ಲಿ ಪ್ರೀತಿಯಿರುವುದು ಸಹಜ. ಆದರೆ ಹಿರಿಯ ಕಿರಿಯರಿಬ್ಬರಲ್ಲಿಯೂ ವಿನಯವನ್ನು ತೋರುವ ನಡೆ ಇವರದು. ಯಾರೊಂದಿಗೂ ಯಾವ ಸಂದರ್ಭದಲ್ಲಿಯೂ ಕೋಪಿಸಿಕೊಳ್ಳದಿರುವ ಸ್ವಭಾವ ಇವರದು.

ವಿನೋದದಿಂದ ಕೂಡಿದ ಪುಟಾಣಿ ಕವನಗಳು ಇವರ ವಿಜ್ಞಾನ ಗೀತೆಯಲ್ಲಿವೆ. ತಿಪ್ಪಣ್ಣ, ಬುಕ್ಕಣ್ಣ, ಕವನಗಳು ಈ ಸಾಲಿಗೆ ಸೇರಿದವು. ಅವಿವೇಕದಿಂದ ಆಗುವ ಅನಾಹುತವನ್ನು ಇವು ಧ್ವನಿಸುತ್ತವೆ. ಬೇಕು ಬೇಡಗಳ ಕುರಿತು ಚಿಕ್ಕ ಹಾಗೂ ಚೊಕ್ಕ ಪದ್ಯ 'ಇರಲಿ-ಇರದಿರಲಿ'

ಕಪ್ಪು ಕೂದಲು ತಲೆಯ
ತುಂಬ ಚಂದದಲಿರಲಿ
ತಿಂಡಿಯೊಳಗಡೆ ಮಾತ್ರ ಕೂದಲಿರದಿರಲಿ.

ಇವನ್ನೆಲ್ಲ ಓದುವಾಗ ನಾವು ಚಿಕ್ಕಂದಿನಲ್ಲಿ ಊರಿಗೆ ನಡೆದು ಹೋಗುತ್ತಿದ್ದಾಗ ಇವರು ಸ್ವಾರಸ್ಯವಾಗಿ ಹೇಳುತ್ತಿದ್ದ ಗೆಲಿವರನ್ ಯಾತ್ರೆ, ಡಾನ್ ಕ್ವಿಕ್ಸೋಟ್‌ನಂತಹ ಕತೆಗಳನ್ನು ಚಪ್ಪರಿಸಿದ ನೆನಪಾಗುತ್ತದೆ.

ಒಟ್ಟಿನಲ್ಲಿ 'ಶೀಲದ ಹಾಗೆ ಶೈಲಿಯೆಂದೆರು, ಶೈಲಿಯೆ ಮನುಜನೆಂಬರು' ಎನ್ನುವ ಮಾತು ಇವರಿಗೆ, ಇವರ ಕೃತಿಗೆ ಒಪ್ಪುತ್ತದೆ.

ಕೂಡಿಗೌಡನು ಕೆಡುವ ಎಚ್ಚರಿರಬೇಕು
ಏಡಿತರ ಕಾಲೆಳೆವ ಬುದ್ಧಿ ಬಿಡಬೇಕು
ನೋಡಿ ಜನ ನಕ್ಕಾರು ತಿಳಿಯದಿರಿ ಜೋಕು
ನೀಡಿ ನೆರವನು ಸತತ ಜತೆ ಸೇರಬೇಕು।

(ಶ್ರೀ ಹಳಸೆ ಉವಾಚ)

ಪಿ.ವಾಸುದೇವ ಗೌಡ

# ಇಂಜಿನಿಯರ್ ಕವಿ ಸಂಕಪ್ಪ ಗೌಡ

ಲಿಂಗಪ್ಪಗೌಡ, ವಿಟ್ಲ



**ಈ ಶಾವಾಸ್ಯಮಿದಂ ಸರ್ವಂ ಯತ್ಕಿಂಚ ಜಗತ್ಯಾ ಜಗತ್,**
**ತೇನತ್ಯಕ್ತೇನ ಭುಂಜಿಥಾಮಾಗೃಧ: ಕಸ್ಯಸ್ವಿದ್ಧನಮ್ ||**

"ಚರಾಚರ ಜಗತ್ತೆಲ್ಲವನ್ನೂ ಈಶ್ವರನಿಂದ ಆವರಿಸು, ತ್ಯಾಗದಿಂದ
ಅವನಿತ್ತುದನ್ನು ಆಸ್ವಾಧಿಸು, ಇತರರ ಸಿರಿಗೆ ಅಳುಕದಿರು
ಮೇಧಾಶಕ್ತಿಗೆ ವೇದ್ಯವಾದರೆ ಕೃತಾರ್ಥವಾಗದು
ಭಾವಕ್ಕೂ ಗೋಚರವಾಗಬೇಕು.
ಚಲಿಸುತ್ತಿರುವ ಜೀವಕೋಟಿಗಳೂ
ಚಲಿಸದಿರುವ ಜಡವಸ್ತುಗಳೂ
ಈ ಪೃಥ್ವಿ, ಈ ಆಕಾಶ, ಈ ಸೂರ್ಯ
ಚಂದ್ರರು ಗೃಹ ನಕ್ಷತ್ರಗಳು
ಅನತಿದೂರದಲ್ಲಿನ ಹೊಳಪಿನ ಹೊಳೆಗಳು
ನದಿ, ಅರಣ್ಯ, ಪರ್ವತ, ಫಲಕುಸುಮಗಳು
ಪ್ರಭಾತ್ ಸಂಧ್ಯೆ ಹುಣ್ಣಿಮೆ ಅಮಾವಾಸ್ಯೆ
ವರ್ಷ, ನಿಧಾಘ, ದಿನಾ ರಾತ್ರಿ

-ಇವುಗಳೆಲ್ಲವೂ ಈಶ್ವರನ ತೇಜಸ್ಸಿನ ಮೂರ್ತಿಗಳು -ಎಂಬ ಭಾವವು ಮನದಲ್ಲಿ ಪ್ರಜ್ವಲಿಸಬೇಕು.

ಸಮಸ್ತ ವಿಶ್ವವನ್ನೂ ಈಶ್ವರನಿಂದ ತುಂಬಿ ಆವರಿಸಿ ಆರಾಧಿಸಬೇಕು. ತ್ಯಾಗದಿಂದ ಅದನ್ನು ಆಸ್ವಾಧಿಸಬೇಕು, ಇತರರ ಸಿರಿಗೆ ಆಸೆ ಪಡಬಾರದು. ಅಂದರೆ ಎಲ್ಲವನ್ನೂ ಈಶ್ವರನಲ್ಲಿ ಸಮರ್ಪಿಸಿ, ನಿಸ್ಸಂಗತತೆಯಿಂದಲೂ, ನಿಷ್ಕಾಮತೆಯಿಂದಲೂ ನಿರ್ಮಾತ್ಸರ್ಯದಿಂದಲೂ ಪ್ರಪಂಚವನ್ನು ಸವಿಯಬೇಕು.

ಆತನ ಸೃಷ್ಠಿಯನ್ನು ಒಲಿಯಬೇಕು, ಅದರಲ್ಲಿಯ ಸೊಬಗನ್ನು ಸವಿಯಬೇಕು, ಆತನ ಜೀವರಾಶಿಗಳನ್ನು ಪ್ರೀತಿಸಬೇಕು, ಅವುಗಳ ಸೇವೆ ಮಾಡಬೇಕು, ಆತನನ್ನು ಪ್ರಾರ್ಥಿಸಬೇಕು, ಧ್ಯಾನಿಸಬೇಕು, ಆತನಲ್ಲಿ ವಿಹರಿಸಬೇಕು, ಅದು ಆರಾಧನೆ, ಅದು ಸಾಧನೆ, . ಅದರಿಂದ ಪರಮ ಶ್ರೇಯಸ್ಸು ಲಭಿಸುತ್ತದೆ. - ಎಂಬುದಾಗಿ ನಮ್ಮ ರಾಷ್ಟ್ರಕವಿ ಕುವೆಂಪುರವರು, ತಮ್ಮ 'ಇತ್ಯಾದಿಯಲ್ಲಿನ - 'ಋಷಿ ದರ್ಶನ' ಮುಖಾಂತರ ನಮಗೆಲ್ಲ ಮನನ ಮಾಡಿಸಿರುತ್ತಾರೆ.

ಇದನ್ನು ಆಗಾಗ ತನ್ನ ಕವಿ ಹೃದಯದಿಂದ ಅನುಭವಿಸಿದವರು ಕಾಣಿಚ್ಚಾರು ಸಂಕಪ್ಪಗೌಡರು. ಇಂಜಿನಿಯರಾಗಿ, ಕವಿಯಾಗಿ, ಓರ್ವ ಸಜ್ಜನ ಸಾತ್ವಿಕ, ಮೃದ್ವು ಹೃದಯಿ ವ್ಯಕ್ತಿಯಾಗಿ ಜೀವನಾನುಭವದಿಂದ ಸರಳ ಸತ್ಯದ ಶಕ್ತಿಯನ್ನು ಮನಗಂಡವರು ಇವರು. 1971ರಲ್ಲಿಯೇ ಪ್ರಕಟಗೊಂಡ ಅವರ ಕವನ ಸಂಕಲನ ಸೊಗಸುವಿನಲ್ಲಿ ನಾವು ಕಣ್ಣಾಡಿಸಿದರೆ ನಮಗೆ ಆಗಾಗ ಇದು ಹೌದೆಂದು ಅನಿಸುತ್ತಾ ಹೋಗುವುದು.

ಅವರ, **ನೀಡು ನಿತ್ಯವು ನಾಡ ಸೊಬಗನು**
ನೋಡಿ ನಲಿವೆನು ದೇವನೇ
ನಾಡಕಲೆ ಇದು ನಮ್ಮ ನೆಲೆ ಇದು
ನಾಡ ಬೆಳಕದು ನಮಗೇನೇ
ಎಲ್ಲಿ ಎಳೆಯರ ಪ್ರಗತಿಗಾಶ್ರಯ
ಇಹುದೊ ಅಲ್ಲದೆ ಚೇತನ
ಅಲ್ಲಿ ವನಿತೆಯರೆಲ್ಲ ನೆಮ್ಮದಿ
ಯಿಂದ ಬಾಳ್ವುದೆ ಪಾವನ
ಸೃಷ್ಟಿ ಸೊಬಗನು ಸವಿಯಲೆಂದೋ
ಕವಿಯ ಕಣ್ಣನು ಪಡೆದೆನು
ವೃಷ್ಟಿಯಾಗಲು ನಮ್ಮ ನಾಡಲಿ

ಶಾಂತಿ ಸೊಬಗನು ಸವಿದೆನು - ಎಂಬ ಅವರ ಉಕ್ತಿಗಲ್ಲಿ ಅವರ ಹೃದಯವು ಸೃಷ್ಟಿಯನ್ನು ಒಲಿಯಲು, ಅದರ ಸೊಬಗನ್ನು ಸವಿಯಲು ಹಾತೊರೆಯುತ್ತಿರುವುದನ್ನು ಮನಗಾಣಬಹುದಾಗಿದೆ. ಸೃಷ್ಟಿ ಸೊಬಗನು ಸವಿಯಲೆಂದೋ ಕವಿಯ ಕಣ್ಣನು ಪಡೆದೆನು, -ಎಂದು ತಮ್ಮ ಧನ್ಯತಾಭಾವ ವ್ಯಕ್ತಪಡಿಸಿರುತ್ತಾರೆ.

ಅವರ ಇದೇ ಸೊಗಸು ಕವನದಲ್ಲಿ

ನನ್ನಿಂದಲೀ ಜಗವು
ಜಗದೊಳೀ ಸೊಗವು
ಎಲ್ಲೆಲ್ಲು ಕಾಣುವೆ ನಾನು ಶಿವಾ
ಸೊಗಸಲೀ ಮನಸು
ಮನಸಿನಲೀ ಕನಸು
ನಿರುತವು ಸವಿವದು ಎನ್ನ ಜೀವಾ
ಸೊಗಸನ್ನು ಸವಿವೆನು
ಸವಿದನ್ನು ಬರೆವೆನು
ಸಹೃದಯವು ಸವಿಯಲದನೆಂದು
ನಿರ್ಮಲ ಹೃದಯವು
ನಿರ್ಭಯದಿಂದಲಿ
ನಿರುತವು ಸವಿವದು ಸೊಬಗನ್ನು
ರವಿಯ ಉದಯವನ್ನು
ಸವಿವನು ಮನದಲ್ಲಿ
ಕವಿಯಾಗಿ ಕಾಣುವೆ ಬೆಳಕನ್ನು

ಈ ತರದಲ್ಲಿ ಎಲ್ಲವನ್ನೂ ಈಶ್ವರನಲ್ಲಿ ಸಮರ್ಪಿಸಿ, ನಿಸ್ಸಂಘತೆಯಿಂದಲೂ, ನಿಷ್ಕಾಮತೆಯಿಂದಲೂ, ನಿರ್ಮಾತ್ಸಯಕದಿಂದಲೂ ಪ್ರಪಂಚವನ್ನು ಸವಿಯುವ ಕವಿ ಹೃದಯವನ್ನು ಪಡೆದವರು ಸಂಕಪ್ಪಗೌಡರು.

ವಿಶ್ವದಂತರವೆಲ್ಲೆ ಆಗಲಿ
ಕ್ರೂರ ಕೃತ್ಯಕ್ಕೆ ಸಿಲುಕಿ ಅಳಿಯುವ
ಆವ ಜೀವಿಯ ಆತ್ಮಕಾದರು ಶಾಂತಿಯಾಶಿಪೆನು—

ಎಂದು ಬಾಳಲಿ ಮಾನವತೆ ಎನ್ನುವ ಅವರ ಕವನದಲ್ಲಿ ಸಾರಿರುವ ಸಂಕಪ್ಪಗೌಡರು ವಿಶಾಲಹೃದಯಿಗಳು. ಅಸಹಾಯಕತೆಯಲ್ಲಿ ಅಸುನೀಗಿದವರೀಗೆ, ಅಸುನೀಗುತ್ತಿರುವವರೀಗೆ - ನೊಂದು ಬೆಂದು ಅಂತಿಮ ಶಾಂತಿಯಾಶಿಪವರು. ಓರ್ವ ರೈತನ ಮಗನಾದ ಇವರು

ಹಳ್ಳೀಗೌಡನು ತನ್ನ ಮಕ್ಕಳ ಢಿಲ್ಲಿಗೋಗಲು ಕಲಿಸದೆ
ಅಲ್ಲೆ ಹೊಲದಲ್ಲೇ ದುಡಿಸಿ, ಧಣಿಸಲು ಅವರ ಗೋಳದು ಕೇಳ್ವದೇ?

ಒಂದುಗೊಂಡೆಲ್ಲೊಕ್ಕಲಿಗರಿಂಧೋಂಕಾರವು ಹೊಮ್ಮಲು ಜನತೆಗನ್ನವ ನೀವ ಯೋಗಿಗೆ - ಜಗದ ಮಾನ್ಯತೆ ಬರಲಿದೆ ಎಂದು ಅವರ ೧೯೮೫ರಲ್ಲಿ ಪ್ರಕಟಗೊಂಡ -'ಭಾರತೀಯನೇ ಎದ್ದೇಳು'-ಎಂಬ ಕವನ ಸಂಕಲನದಲ್ಲಿನ 'ಒಕ್ಕಲಿಗ'ಕವನದಲ್ಲಿ ಒಕ್ಕಲಿಗರಿಗೆಲ್ಲ - ಎಲ್ಲ ರಂಗಗಳಲ್ಲು ಸಂಘವು ಸಂಸ್ಥೆ ಸಂಘಟನೆದ್ದಿದೆ, ನಮ್ಮಲ್ಲಿಯೂ ನಾವೆಲ್ಲ ಒಂದಾಗಿ ಓಂಕಾರ ಮಂತ್ರಿಸ ಬೇಕೆಂದಿರುವರಲ್ಲವೆ, ಸರಕಾರಿ ಹುದ್ದೆಯಿಂದ ೧೯೯೯ರಲ್ಲಿ ನಿವೃತ್ತರಾದ ಮೇಲೆ ನಮ್ಮ ಬಂಟ್ವಾಳ ತಾಲೂಕು ಒಕ್ಕಲಿಗ ಗೌಡರ ಸಂಘದಲ್ಲಿ ತಮ್ಮನ್ನು ತೊಡಗಿಸಿಕೊಂಡು ಸಂಘದ ಒಕ್ಕೊರಳಿನ ಅಪೇಕ್ಷೆಯಂತೆ ಗೌರವಾಧ್ಯಕ್ಷರಾಗಿ ಹಳ್ಳಿಹಳ್ಳಿಗಳ ಮೂಲೆ ಮೂಲೆಗಳಿಗೆ ಸಂಘದ ಪದಾಧಿಕಾರಿಗಳೊಂದಿಗೆ ಹೋಗಿ ಸಂಘಟನೆಗಾಗಿ ಆಶಿಸಿ ಸಂತಸವ ನುಡಿಗಳಲ್ಲಿ ತಮ್ಮನ್ನು ತಾವೇ ಮರೆತು ಹಾಡ ಹಾಡಿರುವವರು.

ಆದಿ ಚುಂಚನಗಿರಿ ಮಹಾಸಂಸ್ಥಾನದ ಶಾಖಾ ಮಠ ಮಂಗಳೂರು ಇಲ್ಲಿಗೆ ಆಗಾಗ ಹೋಗುತ್ತಾ ಶ್ರೀ ಶ್ರೀ ಧರ್ಮಪಾಲನಾಥ ಸ್ವಾಮೀಜಿಯವರ ದರ್ಶನ ಪಡೆಯುತ್ತಾ ಮಠದ ನಿಕಟ ಸಂಪರ್ಕವಿಟ್ಟುಕೊಂಡಿದ್ದು, ಸ್ವಾಮೀಜಿಯವರ ಬಂಟ್ವಾಳ ತಾಲೂಕು ಗ್ರಾಮ ಭೇಟಿ ದಿನಗಳಲ್ಲಿ ಸದಾ ಅವರೊಂದಿಗಿದ್ದು, ಸರಳತನದಲ್ಲಿ ವಿಶಾಲ ಹೃದಯವಂತಿಕೆಯಿಂದ ಆತ್ಮಗೌರವದೊಂದಿಗೆ ಸ್ವಾಮೀಜಿಯವರನ್ನು ಭಕ್ತಿ ತುಂಬಿ ತುಂಬು ಹೃದಯದಿಂದ ಸ್ವಾಗತಿಸುತ್ತಾ ಅವರ ಆಶೀರ್ವಚನವನ್ನು ಆಲಿಸಲು ಹಾತೊರೆಯುತ್ತಿದ್ದ ಭಕ್ತ ಸಮೂಹವನ್ನು

ಸಂತಸದಿಂದ ಕಂಡು ಗ್ರಾಮಗಳಲ್ಲಿ ಗ್ರಾಮ ಮಟ್ಟದ ಸಂಘಟನೆಗಳಲ್ಲಿ ಪಾಲ್ಗೊಂಡು ಹಿರಿಯ ಕಿರಿಯರೆಲ್ಲರೊಂದಿಗೆ ಬೆಲೆಸಗೊಂಡು ಹರುಷಗೊಂಡವರು. ಈಗ ಬಂಟ್ವಾಳ ತಾಲೂಕಿನ ಒಕ್ಕಲಿಗ ಗೌಡರ ಸಂಘದ ಪ್ರಧಾನ ಸಲಹೆಗಾರರಾಗಿ - ಒಕ್ಕಲಿಗ ಗೌಡರ ಸಮುದಾಯ ಭವನ ಬಂಟ್ವಾಳ ತಾಲೂಕು ಅಂಚೆ ವಿಟ್ಲ ಇದಕ್ಕೆ ನೀಲಿ ನಕ್ಷೆಯೊಂದನ್ನು ತಯಾರಿಸಿ ಸಮಾಜ ಸೇವೆಯಲ್ಲಿ ತಮ್ಮನ್ನು ತೊಡಗಿಸಿಕೊಂಡಿರುವರು.

ಇಂಜಿನಿಯರಾಗಿ ಪದವಿ ಪಡೆದು ಲೋಕೋಪಯೋಗಿ ಮತ್ತು ನೀರಾವರಿ ಇಲಾಖೆಗಳಲ್ಲಿ ಸೇವೆ ಸಲ್ಲಿಸುತ್ತಾ ಊರುರು ಅಲೆಯುತ್ತಿದ್ದು, ಅವರು ಸೇವೆಗೆ ಸೇರಿದ ಮೇಲೆ ೧೯೭೧ ಇಸವಿಯಲ್ಲಿ - ಕಾಲ ತಿರುಗುತಿರಲು ಊರು ತಿರುಗುವುದೆನ್ನ

ಉದ್ಯೋಗವಾಗಿರಲು, ಮನ ವಿಶಾಲತೆಗೆ
ಹರಡಲವಕಾಶವನು ಕಲ್ಪಿಸಿದನಾವಿಧಿಯು
ಕನ್ನಡಮ್ಮನ ಕಾಣಲೊಂದಾಗಿ ಕಡೆಗೆ —

ಎಂಬುದಾಗಿ ಬರೆದು ಪ್ರಕಟಿಸಿದ ಅವರ ಸೊಗಸು ಕವನ ಸಂಕಲನದಿಂದ - ಅವರು ಕರ್ನಾಟಕದ ಉತ್ತರ ಮತ್ತು ದಕ್ಷಿಣ ಭಾಗಗಳಲ್ಲಿ ಸೇವೆಯಲ್ಲಿದ್ದು ಊರೂರು ಅಲೆದರೂ - ಕನ್ನಡಮ್ಮನ ಒಂದಾಗಿ ಕಾಣಲೆಡೆಯಾಯಿತೆಂದು, ಆಯಾ ಊರುಗಳಿಗೆ ಒಗ್ಗಿ, ಅಲ್ಲಿಯವರೊಂದಿಗೆ ಒಂದಾಗಿ ಬಾಳಿ ವಿಶಾಲ ಮನೋಭಾವದಿಂದ ಸೇವೆ ಸಲ್ಲಿಸಿದವರು.

ಗೌಡರು ಪ್ರವೃತ್ತಿಯಲ್ಲಿ ಕವಿಗಳಾಗಿದ್ದು, ವೃತ್ತಿಯಲ್ಲಿ ವಾಸ್ತು ಶಿಲ್ಪಿಗಳು. ಕರ್ನಾಟಕ ಪ್ರಾದೇಶಿಕ ತಾಂತ್ರಿಕ ಮಹಾ ವಿದ್ಯಾಲಯ ಸುರತ್ಕಲ್ಲಿನಲ್ಲಿ ಬಿ.ಇ.(ಸಿವಿಲ್) ವ್ಯಾಸಂಗವನ್ನು ನಡೆಸಿ ಮೈಸೂರು ವಿಶ್ವವಿದ್ಯಾನಿಲಯದಿಂದ ಇಂಜಿನಿಯರಿಂಗ್ ಪದವಿ ಪಡೆದು ೧೯೬೮ ರಿಂದ ೧೯೭೦ರವರೇಗೆ ರೈಲ್ವೆ ಇಲಾಖೆಯಲ್ಲಿ -ಹಾಸನ- ಮಂಗಳೂರು ರೈಲು ಮಾರ್ಗ, ರೈಲು ಸುರಂಗ ಮಾರ್ಗ, ಸೇತುವೆಗಳ ಕೆಲಸಗಳ ಸೇವೆಯಲ್ಲಿದ್ದು ಪಶ್ಚಿಮ ಘಟ್ಟದ ಶೀರಾಡಿ, ಗುಂಡ್ಯ ಸಕಲೇಶಪುರ ಬೆಟ್ಟಗಳಲ್ಲಿ ನೆಲೆಸಿ ಅಲ್ಲೆ ಬೆಟ್ಟದಲ್ಲೇ ಪ್ರಕೃತಿ ಮಡಿಲಲ್ಲೇ ಕ್ಯಾಂಪು ಮಾಡಿ, ಪ್ರಕೃತಿ ಪ್ರೇರಣೆಗೆ ಪಾತ್ರರಾದವರು. ಆ ಮೇಲೆ ನಮ್ಮ ರಾಜ್ಯದ ಲೋಕೋಪಯೋಗಿ ಮತ್ತು ನೀರಾವರಿ ಇಲಾಖೆಗಳಲ್ಲಿ ೧೯೭೦ರಿಂದ ೧೯೯೯ರವರೇಗೆ ಬೆಳಗಾಂ ಜಿಲ್ಲೆಯ ಮಲಪ್ರಭಾ ಯೋಜನೆಯಲ್ಲಿ, ಚಿಕ್ಕಮಗಳೂರು ಜಿಲ್ಲೆಯ ಕಳಸದ ಕುದುರೆಮುಖ ರಸ್ತೆ ಯೋಜನೆಯಲ್ಲಿ ಮತ್ತೆ ಶಿವಮೊಗ್ಗ ಜಿಲ್ಲೆಯ ಭದ್ರಾ ನೀರಾವರಿ ಯೋಜನೆ, ಬಿ.ಆರ್.ಪ್ರಾಜೆಕ್ಟ್‌ನಲ್ಲಿ ಆಮೇಲೆ ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯ ಸಮುದ್ರ ಕೊರೆತ ತಡೆಯೋಜನೆಗಳಲ್ಲಿ, ಲೋಕೋಪಯೋಗಿ ಇಲಾಖೆಯಲ್ಲಿ, ಸುರತ್ಕಲ್ ಇಂಜಿನಿಯರಿಂಗ್ ಕಾಲೇಜಿನಲ್ಲಿ ರೆಸಿಡೆಂಟ್ ಇಂಜಿನಿಯರಾಗಿ ಆಮೇಲೆ ತುಂಗಾ ಮೇಲ್ದಂಡೆ ಯೋಜನೆಯಲ್ಲಿ ಕಾರ್ಯಪಾಲಕ ಇಂಜಿನಿಯರಾಗಿ, ಉಪ ಮುಖ್ಯ ಇಂಜಿನಿಯರಾಗಿದ್ದು ಸೇವೆಯಿಂದ ೧೯೯೯ರಲ್ಲಿ ವಯೋ ನಿವೃತ್ತಿ ಹೊಂದಿರುವರು.

ಇವರು ಸತ್ಯ ಸರಳತೆಯ ಸಹೃದಯಿ ವ್ಯಕ್ತಿ. ಸಮುದ್ರ ಕೊರೆತ ನಿವಾರಣಾ ಕೆಲಸಗಳನ್ನು ನೋಡಿಕೊಳ್ಳುತ್ತಿದ್ದು ರಾಜ್ಯದ ಕೋಟ್ಯಾನು ಕೋಟಿ ರೂಪಾಯಿ ಸಂಪತ್ತು ಪ್ರಕೃತಿಯ ವೈಪರೀತಿಗೆ ತೆರೆಗಳ ಅಬ್ಬರದ ಹೊಡೆತಕ್ಕೆ ನೋಡಿ ನೊಂದು ಕೊಂಡವರು. ಇವರ ಉಸ್ತುವಾರಿ ಸಮಯದಲ್ಲಿ ರಚಿತವಾದ ತಡೆಗೋಡೆಗಳು ಕುಳಾಯಿ, ಸಸಿಹಿತ್ಲುಗಳಲ್ಲಿ ಅಬ್ಬರದ ಅಲೆಗಳ ಹೊಡೆತವನ್ನು ಎದುರಿಸಿ ನಿಂತಿರುವುದನ್ನು ಈಗಲೂ ನೋಡಬಹುದಾಗಿದೆ.

ಈ ಯೋಜನೆಗಳಿಗೆ ಅಪಾರ ಸಂಪತ್ತು ಖರ್ಚಾಗುತ್ತಿರುವುದನ್ನು ಅಸಹಾಯಕತೆಯಿಂದ ನೋಡುತ್ತಾ, ಚಿಂತಿಸುತ್ತಾ, ಅನ್ಯ ಮಾರ್ಗೋಪಾಯವನ್ನು ಆಲೋಚಿಸುತ್ತಾ, ಚಿಂತನಗೈಯುತ್ತಾ, ತಮ್ಮ ಕವಿ ಮನದಲ್ಲಿ ಪ್ರಕೃತಿಯಾರಾಧನೆಗೈಯುತ್ತಾ ಸಮಸ್ತ ವಿಶ್ವವನ್ನು ಈಶ್ವರನಿಂದ ತುಂಬಿ ಆವರಿಸಿ ಆರಾಧಿಸಬೇಕು, ತ್ಯಾಗದಿಂದ ಅದನ್ನು ಆಸ್ವಾದಿಸಬೇಕು, ಇತರರ ಸಿರಿಗೆ ಆಸೆ ಪಡಬಾರದು, ಎಲ್ಲವನ್ನು ಈಶ್ವರನಲ್ಲಿ ಸಮರ್ಪಿಸಿ ತನ್ನ ಕರ್ತವ್ಯ ನಿರ್ವಹಿಸಬೇಕು -ಎಂಬ ಮನೋಭಾವದಲ್ಲಿ ಚಿಂತನೆಗೈಯುತ್ತಾ ಸಮುದ್ರ ಕೊರೆತ ತಡೆಗೆ ಸುಲಭೋಪಾಯವಾಗಿ, ತೆರೆಗಳು ಕರಾವಳಿ ದಡಕ್ಕೆ ಅಪ್ಪಳಿಸುವ ಮೊದಲೇ ಆ ಅಲೆಗಳ ಶಕ್ತಿಯನ್ನು ಬಹುತೇಕವಾಗಿ ಕುಂದಿಸಿ, ಅಲೆಗಳು ದಡಕ್ಕೆ ಅಪ್ಪಳಿಸುವ ಮೊದಲೇ ಆ ಅಲೆಗಳ ಶಕ್ತಿಯನ್ನು ನಿಷ್ಕ್ರಿಯಗೊಳಿಸಲು ಯೋಚಿಸಿ "ಜಾಲಂಧ್ರ ಜಾಲರಿ" ಎಂಬ ತೇಲು ತೆಪ್ಪ ನಿರ್ಮಾಣಗೊಳಿಸುವರೆ ರಾಜ್ಯ ಸರಕಾರಕ್ಕೆ ಒಂದು ಯೋಜನೆಯನ್ನೇ ತಯಾರಿಸಿ ಸಲ್ಲಿಸಿರುವರು. ರಾಜ್ಯ ಸರಕಾರವು ಇದನ್ನು ಪ್ರಾಯೋಗಿಕವಾಗಿ ಸಮುದ್ರ ಕೊರೆತ ತಡೆಗೆ ಅಳವಡಿಸುವದೆಂದು ನಂಬಿ ಅದಕ್ಕಾಗಿ ಹಾರೈಸುತ್ತಿರುವರು. (ಈ ಯೋಜನೆಯ ಸಾರಾಂಶವು ಪತ್ರಿಕೆಗಳಲ್ಲಿ ಪ್ರಕಟವಾಗಿದ್ದು. ಇವರು ತಮ್ಮ ೧೯೭೫ರಲ್ಲಿ ಪ್ರಕಟಗೊಂಡ ಕಾಲ-ಶೀಲ ಕವನದಲ್ಲಿನ ವಿಶ್ವಪ್ರೇಮ ಕವನದಲ್ಲಿ -

ಜಾತಿಮತ ಬಂಧನವು ಒಡೆದುಹೋಗಿ
ದೇಶ ದೇಶದ ಗಡಿಯ ತೊಡೆದುಸಾಗಿ
ಓನ್ನಲೆಯ ವೈರವನು ಮುನ್ನವೇ ಕಡಿದು
ಮೂಡುತಿರಲ್ಲೆ ಪ್ರೇಮ ವಿಶ್ವ ಹೃದಯದಲಿ

ಎಂದಿರುವುದು ಸದಾಕಾಲಕ್ಕೂ ಸರ್ವರಿಗೂ ಅನುಕರಣೀಯ ಆನಂದಮಯ ಹಾರೈಕೆಯಾಗಿದೆ.

ಇದೇ ಕವನ ಸಂಕಲನದ ಹೆಣ್ಣು ಪೂಜ್ಯಳು ಕವನದಲ್ಲಿನ ಮೂಢನಂಬಿಕೆಯಲ್ಲಿ ಮೂಡಿರುವ ನಿಯಮಗಳ

ಮೂದಲಿಸಲೇ ಬೇಕು ಮುಂಬರುವ ಹೆಣ್ಣು
ಹೊನ್ನು ಮಣ್ಣಿನ ತೆರದಿ ಹೆಣ್ಣು ಭೋಗದ ವಸ್ತು
ಎಂಬುದನು ತೊರೆಲ್ಯೆ ಈ ಜಗದ ಕಣ್ಣು
ಗಂಡು ಜನತೆಯ ಜೋಡಿ ಜ್ಞಾನ ವಿಜ್ಞಾನದಲಿ
ಮುನ್ನಡೆಯಲೇಬೇಕು ಮುಂಬರುವ ವನಿತೆ
ಹಳೆಯ ಅಜ್ಞಾನಗಳು ಅಳಿದರಳಲ್ಯೆ ಧರ್ಮ
ವಿಜ್ಞಾನದರಿವಿನಲಿ ಚೇತರಿಸಿ ಜನತೆ

ಎಂದಿರುವುದು ಸರ್ವಕಾಲಿಕ ಸಮಂಜಸ ಸತ್ಯವಾಗಿ ಕಾಣಲಿದೆ.

ಶ್ರೀ ಕೆ.ಸಂಕಪ್ಪ ಗೌಡರು 1940ನೇ ಇಸವಿಯಲ್ಲಿ ದಕ್ಷಿಣ ಕನ್ನಡ ಜಿಲ್ಲಾ ಬಂಟ್ವಾಳ ತಾಲೂಕು, ಕನ್ಯಾನ ಗ್ರಾಮದ ಕಾಣೆಚ್ಚಾರಿನಲ್ಲಿ ಜನಿಸಿದರು. ತಂದೆ ದಿ। ದೇರಪ್ಪ ಗೌಡರು, ತಾಯಿ ದಿ। ಪೂವು(ಪೂವಮ್ಮ) ಸಹಧರ್ಮಿಣಿ ಸೌ। ಸಾವಿತ್ರಿ. ಇಬ್ಬರು ಹೆಣ್ಣು ಮಕ್ಕಳು, ಇಬ್ಬರು ಗಂಡು ಮಕ್ಕಳು ಇವರು ಸಾಹಿತ್ಯದಲ್ಲಿ ಅಭಿರುಚಿಯುಳ್ಳವರಾಗಿದ್ದು, ಪೂಸುತ ಎಂಬ ಕಾವ್ಯನಾಮದೊಂದಿಗೆ ಧ್ರುವತಾರೆ, ಸೊಗಸು, ಕಾಲ-ಶೀಲ ಮತ್ತು ಭಾರತೀಯನೇ ಎದ್ದೇಳು ಎಂಬ ತಮ್ಮ ಕವನ ಸಂಕಲನಗಳನ್ನು 1971, 1975 ಮತ್ತು 1985ರಲ್ಲೇ ಪ್ರಕಟಿಸಿರುವರು ಮತ್ತೆ ಇನ್ನೆರಡು ಕವನ ಸಂಕಲನಗಳನ್ನು 2003ನೇ ಇಸವಿ, ಅಂದರೆ ಬರುವ ವರ್ಷದಲ್ಲಿ ಪ್ರಕಟಿಸಲಿದ್ದಾರೆ.

ಸರಕಾರಿ ಸೇವೆಯಿಂದ ನಿವೃತ್ತರಾದ ಮೇಲೆ ಸ್ಥಳೀಯ ಒಕ್ಕಲಿಗ ಗೌಡರ ಸಂಘ ಸಂಸ್ಥೆಗಳಲ್ಲಿ ತಮ್ಮನ್ನು ತೊಡಗಿಸಿಕೊಂಡು ಹಿರಿಯರಿಂದ ಬಂದ ಕೃಷಿಯನ್ನು ಮುಂದುವರಿಸಿಕೊಂಡು, ವಾಸ್ತು ಶಿಲ್ಪಿಯಾಗಿ, ನಮ್ಮ ವೇದ ಕಾಲದಿಂದಲೇ ಬಂದಿರುವ ಪ್ರಾಚೀನ ವಾಸ್ತುವಿನ ಅಧ್ಯಯನದಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ. ವಿಟ್ಲದಲ್ಲಿ ತಮ್ಮದೇ ಆದ ಕೆಎಸ್‌ಜಿ ಕನ್‌ಸಲ್ಟೆನ್ಸಿ ಮತ್ತು ಕನ್‌ಸ್ಟ್ರಕ್ಷನ್ ಕಛೇರಿ ತೆರೆದು ಕನ್‌ಸಲ್ಟಿಂಗ್ ಇಂಜಿನಿಯರಾಗಿ ಸೇವೆ ನಿರ್ವಹಿಸುತ್ತಿದ್ದಾರೆ.

# ಪ್ರಸೂತಿ ತಜ್ಞೆ ಹಾಗೂ ನಾಟಿ ವೈದ್ಯೆ ತಿಮ್ಮಕ್ಕ

✍ ಕಾಣೆಚ್ಚಾರು ಸಂಕಪ್ಪ ಗೌಡ



ಹೆಸರು : ಶ್ರೀಮತಿ ತಿಮ್ಮಕ್ಕ, ಪ್ರಾಯ 80ವರ್ಷ

ಗಂಡ : ತನಿಯಪ್ಪಗೌಡ

ವಿಳಾಸ : ಸಂಕೇಶ ಮನೆ, ಪುಣಚಾ ಗ್ರಾಮ, ಬಂಟ್ವಾಳ ತಾಲೂಕು,

ವಿಶೇಷತೆಗಳು : ಸುಮಾರು 40 ವರ್ಷದ ಅನುಭವದಲ್ಲಿ 2000 ಕ್ಕಿಂತಲೂ ಹೆಚ್ಚು ಹೆರಿಗೆ ಮಾಡಿಸಿರುತ್ತಾರೆ ವಿಟ್ಲ P.H.C ಯಲ್ಲಿ ತರಬೇತಿ ಹಾಗೂ ಬೇಕಾದ ಸಲಕರಣೆ ನೀಡಿರುತ್ತಾರೆ.

ಹೆಂಗಸರ ಕಾಯಿಲೆಗಳಿಗೆ ಬಂಜೆತನ ಹಾಗೂ ಅನೇಕ ಕಾಯಿಲೆಗಳಿಗೆ ಔಷಧಿ ನೀಡುತ್ತಿದ್ದಾರೆ. ಇವರ ಔಷಧದ ಪರಿಣಾಮವಾಗಿ ಅನೇಕರು ಸಂತಾನ ಭಾಗ್ಯ ಪಡೆದಿರುತ್ತಾರೆ. ಹಳದಿ ರೋಗ, ಸರ್ಪಸುತ್ತು, ಕೆಂಪು ವಾತ, ಸಣ್ಣ ಮಕ್ಕಳ ಕಾಯಿಲೆಗಳು, ಮೂಲವ್ಯಾಧಿಗಳಲ್ಲದೆ ಅನೇಕ ಕಾಯಿಲೆಗಳಿಗೂ ಚಿಕಿತ್ಸೆ ನೀಡುತ್ತಾ ಯಾವುದೇ ಪ್ರತಿಫಲದ ಅಪೇಕ್ಷೆ ಇಲ್ಲದೆ ಸೇವೆಸಲ್ಲಿಸುತ್ತಿದ್ದಾರೆ.

ಈ ಮಹಾ ತಾಯಿಯನ್ನು ದಿನಾಂಕ 1.12.2000 ರಂದು ವಿಟ್ಲದಲ್ಲಿ ಜರಗಿದ ಬಂಟ್ವಾಳ ಗೌಡ ಸಮ್ಮೇಳನದಲ್ಲಿ ಪೂಜ್ಯ ಶ್ರೀಶ್ರೀ ಧರ್ಮಪಾಲನಾಥ ಸಾಮೀಜಿ ಶ್ರೀ ಆದಿಚುಂಚನಗಿರಿ ಮಂಗಳೂರು ಶಾಖಾಮಠ, ಇವರ ದಿವ್ಯ ಸಾನಿಧ್ಯದಲ್ಲಿ ಹಾಗೂ ಶ್ರೀ ದೇವಿ ಪ್ರಸಾದ್, ಸಂಪಾಜೆ, ಶ್ರೀಬಸವೇಗೌಡ, ಅಧ್ಯಕ್ಷರು ಒಕ್ಕಲಿಗ ಸಂಘ, ಬೆಂಗಳೂರು, ಶ್ರೀ.ಸಿ.ಪಿ. ಜಯರಾಂ, ಶ್ರೀಮತಿ ಲೋಕೇಶ್ವರಿ ವಿನಯ ಚಂದ್ರ ಇವರ ಸಮ್ಮುಖದಲ್ಲಿ ಸರ್ವಸಮಾಜ ಬಾಂಧವರ ಪರವಾಗಿ ಸನ್ಮಾನಿಸಲಾಗಿದೆ.

# ಕವಿ ಹೃದಯದ ವಿದ್ವಾಂಸ ಪ್ರೊ. ಕೆ. ಕುಶಾಲಪ್ಪ ಗೌಡ

ಕಿರಣ



ವಿದ್ವತ್ತು, ವಿನಯಗಳ ಪ್ರತಿನಿಧಿಯಂತಿರುವ ಪ್ರೊ. ಕೋಡಿ ಕುಶಾಲಪ್ಪ ಗೌಡರು ಕವಿ ಮನೋಧರ್ಮದ ಸಜ್ಜನ, ಸ್ಥೂಲಕಾಯದೊಳಗೆ ತಿಳಿಹಾಸ್ಯಕ್ಕೆ ವಾಸಸ್ಥಳವನ್ನೊದಗಿಸಿದ ಪ್ರಸನ್ನ ಚಿತ್ತದ ಉದಾರಿ. ಇವರನ್ನು ವಿಶ್ವವಿದ್ಯಾನಿಲಯಗಳ ವಿದ್ವಾಂಸರು ಭಾಷಾ ವಿಜ್ಞಾನದ ತಜ್ಞನೆಂದು ಪರಿಗಣಿಸಿದ್ದಾರೆ. ಸಭೆ ಸಮಾರಂಭಗಳಲ್ಲಿ ಇವರ ಹೆಸರಿನ ಮೊದಲು ಅಥವಾ ನಂತರ ಭಾಷಾ ವಿಜ್ಞಾನಿ ಎಂಬ ಪದ ಕಾಣಿಸಿಕೊಳ್ಳುತ್ತದೆ. ಅಣ್ಣಾಮಲೈ, ಮದ್ರಾಸು ಮತ್ತು ಮ್ಯಾಂಚೆಸ್ಟರ್ ವಿಶ್ವವಿದ್ಯಾಲಯಗಳಲ್ಲಿ ಅಧ್ಯಯನ, ಅಧ್ಯಾಪನ ಮಾಡಿ ಕೀರ್ತಿ ಪ್ರೀತಿಗಳಿಗೆ ಪಾತ್ರರಾಗಿರುವ ಇವರು 79ರ ಅಂಚಿನಲ್ಲಿದ್ದಾರೆ. ಮದ್ರಾಸು ವಿಶ್ವವಿದ್ಯಾಲಯದ ಕನ್ನಡ ಪ್ರೊಫೆಸರ್ ಮತ್ತು ವಿಭಾಗದ ಮುಖ್ಯಸ್ಥರಾಗಿದ್ದ ಇವರು ನಿವೃತ್ತರಾಗಿ ಸುಳ್ಯದಲ್ಲಿ ನೆಲೆಸಿದ್ದಾರೆ.

ಇವರ ಮೆಚ್ಚಿನ ಕವಿ ಪಂಪ. ಇದಕ್ಕೆ ಇವರು ನೀಡುವ ಕಾರಣಗಳಿವು: ಕಾವ್ಯಧರ್ಮ, ಲೌಕಿಕ ಧರ್ಮ, ನಾಡಪ್ರೇಮ, ಗಾಂಭೀರ್ಯ, ಹಿತಮಿತವಾದ ಮಾತು, ಸಂದರ್ಭಕ್ಕೆ ಸರಿಯಾದ ಪದಪ್ರಯೋಗ, ಉದಾರತೆ, ಆತ್ಮಾಭಿಮಾನ, ರಸಿಕತೆ- ಹೀಗೆ ಹತ್ತು ಹಲವು ಗುಣಗಳು ಪಂಪನಲ್ಲಿ ಮೇಳೈಸಿವೆ. ಶೌರ್ಯ, ಪರಾಕ್ರಮ, ಉದಾತ್ತತೆ, ಮೈತ್ರಿ, ಗುರುಶಿಷ್ಯರ ಸಂಬಂಧ, ಹಿರಿಕಿರಿಯ ನಡವಳಿಕೆಗಳಲ್ಲಿ ಗೌರವ, ಮಾನವ ತುಮುಲಗಳು ಮುಂತಾದ ಮಾನವ ಜೀವನದ ಮುಖ್ಯ ಮೌಲ್ಯಗಳು ಅವನ ಕಾವ್ಯದಲ್ಲಿವೆ. ಹದಗೆಟ್ಟ ಬದುಕಿಗೆ ದಿಕ್ಸೂಚಿಯಾಗಬಲ್ಲಂತ ಕಾವ್ಯ ಪಂಪನದು. ಆದುದರಿಂದ ತಾನು ಪಂಪನನ್ನು ಮೆಚ್ಚುತ್ತೇನೆ ಎನ್ನುವ ಮಾತುಗಳು ಇವರ ಮನೋಧರ್ಮದ ಪರಿಚಯಕ್ಕೂ ಸಹಕಾರಿಯಾಗಿವೆ.

ತಾರುಣ್ಯದಲ್ಲಿ ಕವಿತೆಗಳನ್ನು ಬರೆಯುತ್ತಿದ್ದುದು ಅಲ್ಲದೆ ಹಾಡುವುದೂ ಪ್ರಿಯ ಹವ್ಯಾಸವಾಗಿತ್ತು. ದಾಂಪತ್ಯ ಜೀವನದ ಸರಸ ಕ್ಷಣಗಳನ್ನು ಕಾವ್ಯಮಾಧ್ಯಮದಲ್ಲಿ ದಾಖಲಿಸಿಕೊಂಡು ಜೋಪಾನವಾಗಿ ತನ್ನ ಬಳಿಯೇ ಇರಿಸಿಕೊಂಡಿದ್ದಾರೆ! ವಿದ್ವಾಂಸರಿಗೂ ವೃದ್ಧಾಪ್ಯ ತಪ್ಪಿದಲ್ಲ. ತಾತನಾದ ಮೇಲೆ ಮೊಮ್ಮಗಳಿಗೊಂದು ಜೋಗುಳ ಹಾಡು ಬರೆದಿದ್ದಾರೆ.

ಗಿಡ ಬಿಡುವ ಹೂವು ಹೂವನ್ನರಳಿಸಿ ನಸುನಗುವ ಬೆಳಗಿನ ಎಳೆಬಿಸಿಲು, ಬೀಸುವ ತಂಗಾಳಿ, ದಳಗಳ ಮೇಲೆ ಮಿನುಗುವ ಮಂಜಿನ ಹನಿಮಣಿಗಳು ಸರಳ ಸಂಗತಿಗಳಲ್ಲ. ಬೆಳಗು ಬೈಗುಗಳಲ್ಲಿ, ಹಕ್ಕಿಯ ಕೊರಳ ಕೊಳಲಿನಲ್ಲಿ, ತೊಟ್ಟಿಲ ಮಗುವಿನ ಸುಹಾಸದಲ್ಲಿ ತೋರುವ ಸರಳತೆ ಇದೆ. ಜೀವನ ಸಂಗೀತಕ್ಕೆ ಈ ಸರಳ ಸಂಗತಿಗಳೇ ಶ್ರುತಿ ಹಿಡಿಯುತ್ತಿರುವುದನ್ನು ಈ ಹಾಡು ಕಾಣಿಸುತ್ತದೆ. ತುಂಬು ಚಂದಿರನಿಂದ ಬಂದಿಳಿದ ಬೆಳ್ದಿಂಗಳು, ಮಲ್ಲಿಗೆಯ ಮೈದಡವಿ ಬಂದ ತಂಗಾಳಿ, ಹಾಡುವ ಕೋಗಿಲೆ, ಅರಳಿರುವ ಚೆಂಗುಲಾಬಿ, ಗುಂಜಾರವದ ಕಪ್ಪು ತುಂಬಿಗಳು, ಕೆಂದಳಿರು ಮುಂತಾದ ನಿಸರ್ಗದ ಚೇತನಗಳು ತೊಟ್ಟಿಲ ಮಗುವನ್ನು ತೂಗಿ ಹಾಡಿ ಸಂತೋಷದಲ್ಲಿ ಭಾಗಿಗಳಾಗುವ ಕಲ್ಪನೆ ವಿಶಿಷ್ಟವಾಗಿರುವಂತೆ ಆಪ್ತವೂ ಹೌದು. ಒಲುಮೆ, ವಾತ್ಸಲ್ಯಗಳ ಅಪೇಕ್ಷೆಯಂತೆ ಪದವಿಡುವ ಪದ್ಯವನ್ನು ಬರೆಯಬಲ್ಲ ವಿದ್ವಾಂಸರಿವರು.

ಬಾಲ್ಯದ ದಿನಗಳನ್ನು ಪ್ರಬುದ್ಧ ವಯಸ್ಸಿನಲ್ಲಿ ನೆನಪಿಸಿಕೊಂಡು ಅವುಗಳನ್ನು ಜೀವನಾನುಭವಗಳ ಮೂಲಕ ಪರೀಕ್ಷಿಸಿ ರಚಿಸಿದ ಲಲಿತ ಪ್ರಬಂಧಗಳು ಹಾಸ್ಯದ ಲೇಪನದಿಂದಾಗಿ ರೋಚಕವಾಗಿದೆ. 'ಊರೊಸಗೆ', 'ಕಡಲತಡಿ ಕನವರಿಕೆಗಳು', 'ಬೆಟ್ಟದಾ ಮೇಲೊಂದು ಮನೆಯ ಮಾಡಿ' ಸಂಕಲನಗಳ ಪ್ರಬಂಧಗಳು ಗದ್ಯಕಾವ್ಯಕ್ಕೆ ಉತ್ತಮ ಮಾದರಿಗಳು. "ಊರೊಸಗೆ" ಬಹುಪಾಲು 'ಪಯಸ್ವಿನಿ'ಯದೇ ಕತೆಯಾಗಿದೆ. ಆಕಾಶಕ್ಕೆ ಏಣಿಯಿಟ್ಟಂತೆ ಬೆಳೆದ ಬಿದಿರುಗಳು, ನೀರಿಗೆ ತುಳುಂಕೆಂದು ಕಾಯಿಗಳನ್ನು ಉದುರಿಸುವ, ಸಿರಿಪೊನ್ನೆ ಮರಗಳು; ಮೀನಿನ ಬೇಟೆಯ ಕೊರಗ, ಚನಿಯರು; ನೀರಿಗೆ ಬಿದ್ದ ಹೋಂತಜ್ಜ. ಇಂಥ ಚಿತ್ರಗಳನ್ನು ಬರೆಯುವ ಭಾಷೆ ಕುಶಾಲಪ್ಪ ಗೌಡರಿಗೇ ವಿಶಿಷ್ಟವಾದುದು. ಇಲ್ಲಿ ಬರುವ 'ಬಾಲವಿಲ್ಲದ ನರಿ' ನಮಗೆ ತಿಳಿದಿರುವ ಪಂಚತಂತ್ರ ಕತೆಗಳ ಗುಂಪಿಗೆ ಹೊಸ ಸೇರ್ಪಡೆ.

ಇವರ ಕಾವ್ಯಶಕ್ತಿ ಪ್ರಕಟವಾಗರುವುದು 'ಕಮಲ ನಿಮೀಲನ' ಎಂಬ ಗದ್ಯ ಕೃತಿಯಲ್ಲಿ. ತನ್ನ ಸಂಶೋಧನೆ, ಶೈಕ್ಷಣಿಕ ಪ್ರಗತಿ, ವಿದ್ವದ್ವಲಯದಲ್ಲಿ ದೊರೆತ ಮನ್ನಣೆ, ಸಾಹಿತ್ಯಿಕ ಸಾಧನೆಗಳ ಹಿಂದಣ ಶಕ್ತಿ, ಸ್ಫೂರ್ತಿಯಾಗಿದ್ದ ಪತ್ನಿಯ ಅಕಾಲಿಕ ಸಾವು ಸೃಷ್ಟಿಸಿದ ಕೃತಿಯಿದು. ಕಳೆದ ದಿನಗಳ ಹಾಸ್ಯ-ಲಾಸ್ಯ, ಪ್ರೇಮ-ಸಲ್ಲಾಪ, ಸಿಹಿಕಹಿಗಳನ್ನು ತನಗೆ ತಾನೇ ಹೇಳಿಕೊಳ್ಳುವ ರೀತಿಯ ಬರವಣಿಗೆ ಇದು. ಸುಖದ ಬೆನ್ನಿನ ಮೇಲೆ ದುಃಖ ಸವಾರಿ ಮಾಡುವ ದೃಶ್ಯ ಕಣ್ಣೆದುರಿಗೆ ಬರುತ್ತಿರುತ್ತದೆ. ನಿಶ್ಚಲವಾಗಿರುವ ಶರೀರದೊಳಗಿದ್ದ ಮನಸ್ಸು, ಒಡನಾಟ, ಕೊಟ್ಟುಕೊಂಡ ಪ್ರೀತಿ, ಗಳಿಸಿದ ಪ್ರಸನ್ನತೆ, ಅರಳಿಕೊಂಡ ಜೀವನ-ಓದುಗನನ್ನು ಸೆರೆಹಿಡಿಯಬಲ್ಲ ವಿವರಗಳು ಕಾವ್ಯಮಯವಾಗಿವೆ.

ಮೇಲಿನದೇ ವಸ್ತು 'ಬೆಟ್ಟದಾ ಮೇಲೊಂದು ಮನೆಯ ಮಾಡಿ' ಪ್ರಬಂಧದಲ್ಲಿ ಮತ್ತೆ ಜೀವಂತವಾಗಿದೆ. ಲಘು ಧಾಟಿಯಲ್ಲಿ ಹರಟುತ್ತಾ ಓದುಗನನ್ನು ತನ್ನೊಂದಿಗೆ ಕರೆದೊಯ್ಯುವ ಈ ಪ್ರಬಂಧ ತನ್ನ ಪ್ರಿಯ ಪತ್ನಿಯ ಅಪೇಕ್ಷೆಯಂತೆ ನಿರ್ಮಿಸಿದ ಮನೆಯನ್ನು ತಾನೊಬ್ಬನೇ

ಪ್ರವೇಶ ಮಾಡಬೇಕಾಯಿತೆಂಬ ನೋವನ್ನು ಮುಚ್ಚಿಟ್ಟುಕೊಂಡಿದೆ. ಇದೆಲ್ಲವೂ ಸಹಜ, ಅಂಜಲೇಕೆ? ಎಂಬ ಧ್ವನಿಯನ್ನು ಶೀರ್ಷಿಕೆ ಹೊರಡಿಸುತ್ತದೆ.

ಈ ಹಿರಿಯರಿಗೆ ಕಿರಿಯರ ಬಗ್ಗೆ ವಿಶೇಷವಾದ ಅಕ್ಕರೆ, ಅಭಿಮಾನಗಳಿವೆ. ಯುವಕರು ಲೋಕಾನುಭವವನ್ನು ಗಳಿಸಿಕೊಳ್ಳಬೇಕು. ತಾನೇಕೆ ಬರೆಯುತ್ತೇನೆಂಬ ಪ್ರಜ್ಞೆ ಜಾಗೃತವಾಗಿರಬೇಕು. ಬರೆದುದೆಲ್ಲವನ್ನು ಪ್ರಕಟಿಸಬೇಕೆಂಬ ಚಪಲದಿಂದ ಮುಕ್ತರಾಗಬೇಕು ಎಂದು ಹೇಳುತ್ತಿರುತ್ತಾರೆ. ಒಬ್ಬನು ಪ್ರಾಮಾಣಿಕತನದಿಂದ ಯಾವುದೇ ಕಾರ್ಯದಲ್ಲಿ ಮಗ್ನನಾಗಿರಲಿ ಒಂದಲ್ಲ ಒಂದು ದಿನ ಅವನು ಜಯಶೀಲನಾಗಿಯೇ ಆಗುತ್ತಾನೆಂದು ಪ್ರೊ. ಕುಶಾಲಪ್ಪ ಗೌಡರು ನಂಬುತ್ತಾರೆ.

❋ **ಪ್ರಕಟಿತ ಕೃತಿಗಳು:** ಇಂಗ್ಲಿಷ್ ಭಾಷೆಯ 4 ಪುಸ್ತಕಗಳು ಸೇರಿದಂತೆ 17 ಕೃತಿಗಳು. ಭಾಷಾ ವಿಜ್ಞಾನ, ಸಂಶೋಧನೆ, ಲಲಿತ ಪ್ರಬಂಧಗಳು, ಅನುವಾದಿತ ಕಾವ್ಯ- ಹೀಗೆ ಬೇರೆ ಬೇರೆ ಪ್ರಕಾರಗಳಿಗೆ ಸೇರಿದ ಹೆಚ್ಚಿನ ಪುಸ್ತಕಗಳು ಮದ್ರಾಸು, ಅಣ್ಣಾಮಲೈ ಮತ್ತು ಬೆಂಗಳೂರು ವಿಶ್ವವಿದ್ಯಾಲಯಗಳಿಂದ ಪ್ರಕಟವಾಗಿದೆ. ಸುಮಾರು 78 ಸಂಶೋಧನಾತ್ಮಕ ಪ್ರೌಢ ಪ್ರಬಂಧಗಳನ್ನು ವಿದ್ವತ್ ಗೋಷ್ಠಿಗಳಲ್ಲಿ ಮಂಡಿಸಿದ್ದಾರೆ. ಪ್ರಬುದ್ಧ ಕರ್ನಾಟಕ, ವಾರ್ಷಿಕಾಂಕ, ಸ್ಮರಣ ಸಂಚಿಕೆಗಳಲ್ಲಿ ಪ್ರಕಟಿಸಿದ್ದಾರೆ. ಆಗಾಗ ಕವಿತೆಗಳನ್ನೂ ಬರೆದು ಜೀವನ, ಜಯ ಕರ್ನಾಟಕಗಳಲ್ಲಿ ಬೆಳಕು ಕಾಣಿಸಿದ್ದಾರೆ.

❋ **ಪ್ರಶಸ್ತಿ ಗೌರವ:** ಸೋವಿಯತ್ ಲ್ಯಾಂಡಿನ ಚಿನ್ನದ ಪದಕ, ಕರ್ನಾಟಕ ಸಾಹಿತ್ಯ ಅಕಾಡೆಮಿ ಪುಸ್ತಕ ಪ್ರಶಸ್ತಿ(ಎರಡು ಬಾರಿ) ಮತ್ತೊಮ್ಮೆ ಗೌರವ ಪ್ರಶಸ್ತಿ, ಕಂಚಿ ಕಾಮಕೋಟಿ ಮಠದ ಚಿನ್ನದ ಪದಕ, ಸುಳ್ಯ ತಾಲೂಕು ಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆ, ದ.ಕ. ಜಿಲ್ಲಾ ಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆ. ಕನ್ನಡ ನಾಡ ರಾಜ್ಯೋತ್ಸವ ಪ್ರಶಸ್ತಿಯನ್ನು ನೀಡಿ ಗೌರವವನ್ನು ಹೆಚ್ಚಿಸಿಕೊಂಡಿದೆ.

❋ ಅಣ್ಣಾಮಲೈ ವಿ.ವಿಯಿಂದ ಪಿ.ಎಚ್.ಡಿ. ಪದವಿ ಪಡೆದ ಡಾ. ಕುಶಾಲಪ್ಪ ಗೌಡರು 7 ಜನರಿಗೆ ಪಿ.ಎಚ್.ಡಿ. ಸಂಶೋಧನೆಗೆ ನಿರ್ದೇಶನ ಮಾಡಿದ್ದಾರೆ. ●

# ಗೃಹವಾಸ್ತು ತಜ್ಞ ಸುಬ್ಬಣ್ಣ ಗೌಡ

✍ ಕಾಣಿಚ್ಚಾರು ಸಂಕಪ್ಪ ಗೌಡ



ಹೆಸರು : ಶ್ರೀ. ಸುಬ್ಬಣ್ಣ ಗೌಡ ಗೃಹವಾಸ್ತು ತಜ್ಞರು (ನಿವೃತ್ತ ಅಧ್ಯಾಪಕರು)

ತಂದೆ : ದಿ.ಕಾಣಿಚ್ಚಾರು ತುಕ್ರಪ್ಪಗೌಡ,

ತಾಯಿ : ಶ್ರೀಮತಿ ಲಕ್ಷ್ಮೀ

ಪ್ರಾಯ : 75ವರ್ಷ.

ವಿಳಾಸ : ಶಾರದಾನಿಲಯ, ಪೂರ್ಲಪ್ಪಾಡಿ ವಿಟ್ಲ ಪಡ್ನೂರು ಗ್ರಾಮ, ಕೊಡಂಗಾಯ ಅಂಚೆ, ಬಂಟ್ವಾಳ ತಾಲೂಕು, ದೂರವಾಣಿ 35327

1960 ರಿಂದ ಜೋತಿಷ್ಯ, ಗೃಹವಾಸ್ತು ಶಾಸ್ತ್ರದ ಪ್ರಕಾರ ಮನೆಗಳ ನಿರ್ಮಾಣದ ಬಗ್ಗೆ ಸಲಹೆ ಸೂಚನೆಗಳು, ಕೆರೆ,ಬಾವಿಗಳನ್ನು ರಚಿಸುವರೇ ನೀರಿನ ಮೂಲವನ್ನು ತಿಳಿಸುವುದು ಮೊದಲಾದ ಕಾರ್ಯಗಳನ್ನು ಯಾವುದೇ ಫಲಾಪೇಕ್ಷೆ ಇಲ್ಲದೆ ದಕ್ಷಿಣ ಕನ್ನಡ, ಕಾಸರಗೋಡು ಹಾಗೂ ಕೊಡಗು ಜಿಲ್ಲೆಗಳ ವ್ಯಾಪ್ತಿಯಲ್ಲಿ ಮಾಡುತ್ತಿದ್ದಾರೆ.

ದಿನಾಂಕ 1.12.2002 ರ ಬಂಟ್ವಾಳ ತಾಲೂಕು ಗೌಡ ಸಮ್ಮೇಳನದಲ್ಲಿ ಸಮಾಜ ಬಾಂಧವರ ಪರವಾಗಿ ಪೂಜ್ಯ ಶ್ರೀ.ಶ್ರೀ.ಧರ್ಮಪಾಲನಾಥ ಸ್ವಾಮಿಗಳ ಸಮ್ಮುಖದಲ್ಲಿ ಸನ್ಮಾನಿಸಲಾಗಿದೆ. ●

# ಸಮಾಜ ಸೇವಕ, ಸಜ್ಜನ ಬಾಲಕೃಷ್ಣ ಗೌಡ

✍ ಕಿರಣ



ತಾವು ಪ್ರೀತಿಯಿಂದ ಮಾಡಿದ ಕೆಲಸಗಳನ್ನು ಇತರರು ನೆನಪಿಡಬೇಕೆಂದು ಸಜ್ಜನರು ಬಯಸುವುದಿಲ್ಲ. ಅನ್ಯರ ತೃಪ್ತಿಗಾಗಿ ಕೆಲಸ ಮಾಡುವುದಿಲ್ಲ, ಸಣ್ಣ ಪುಟ್ಟ ಕೆಲಸವಾದರೂ ಶ್ರದ್ಧೆಯಿಂದ ಮಾಡುತ್ತಾರೆ, ಕೃತಜ್ಞತೆಯ ಅಪೇಕ್ಷೆಯಿಂದಲ್ಲ. ಉಪಕೃತರು ಸದಾ ಕೃತಜ್ಞರಾಗಿರಬೇಕೆಂದು ನಿರೀಕ್ಷಿಸುವವರು ಅನೇಕ ವೇಳೆ ನಿರಾಶೆಗೆ ಗುರಿಯಾಗುತ್ತಾರೆ. ನಿರೀಕ್ಷಿಸದ ಸಜ್ಜನರು ನಿರಾತಂಕರಾಗಿರುತ್ತಾರೆ. ಕ್ಷುದ್ರತೆ ತಲುಪಲಾಗದಷ್ಟು ಎತ್ತರದಲ್ಲಿರುತ್ತಾರೆ. ಶ್ರೀ ಎಂ. ಬಾಲಕೃಷ್ಣ ಗೌಡರು ನಾನು ಕಂಡ ಸಜ್ಜನ. ಶುಭ್ರ ಉಡುಪಿನ ಶುಭ್ರ ವ್ಯಕ್ತಿ. ನಿರಾಡಂಬರದ ಕ್ರಿಯಾಶೀಲ.

ಐವತ್ತರ ದಶಕದಲ್ಲಿ ನಾನು ಸುಳ್ಯದ ಹೈಸ್ಕೂಲಿನ ವಿದ್ಯಾಥಿ, ಚಡ್ಡಿಧಾರಿ. ಆ ಕಾಲದಲ್ಲೊಂದು ದಿನ ಹೈಸ್ಕೂಲು ವಿದ್ಯಾರ್ಥಿ, ಚಡ್ಡಿಧಾರಿ. ಆ ಕಾಲದಲ್ಲೊಂದು ದಿನ ಹೈಸ್ಕೂಲು ರಸ್ತೆಗೆ 'ಮೊಳಹಳ್ಳಿ ಶಿವರಾವ್ ರಸ್ತೆ' ಎಂದು ನಾಮಕರಣವಾಯಿತು. ನಾಮಫಲಕದ ಉದ್ಘಾಟನೆ ಸಂಪಾಜೆ ಸಣ್ಣಪ್ಪ ಪಟೇಲರಿಂದ, ಅವರ ಪಕ್ಕದಲ್ಲಿ ಸ್ಫುರದ್ರೂಪಿ ಯುವಕ ಶುಭ್ರ ಬಿಳಿಯುಡುಪಿನಲ್ಲಿದ್ದರು. ಅವರು ಬಾಲಕೃಷ್ಣ ಗೌಡರೆಂದು ನನ್ನ ಪಕ್ಕದಲ್ಲಿದ್ದವರು ಹೇಳಿದರು. ಮನಸ್ಸಿನಲ್ಲಿ ಚಿತ್ರ ಉಳಿದುಕೊಂಡಿದೆ.

ಈ ಮಧ್ಯೆ ಪಯಸ್ವಿನಿಯಲ್ಲಿ ಅದೆಷ್ಟೋ ನೀರು ಹರಿದು ಹೋಗಿದೆ. ಬಾಲಕೃಷ್ಣ ಗೌಡರು ತನ್ನ ತನವನ್ನು ಉಳಿಸಿಕೊಂಡಿದ್ದಾರೆ. ಬಿಳಿ ಬಣ್ಣ ಬಿಸಿಲಿಗೆ ಮಾಸಿ ಹೋಗುವುದಿಲ್ಲ. ನೀರಿನಲ್ಲಿ ಕರಗಿ ಹೋಗುವುದಿಲ್ಲ. ಶ್ವೇತಕ್ಕೆ ಶಾಶ್ವತ ಸ್ಥಾನಮಾನ?

ಈಗ ಮಾರುತಿಯ ಮಾಲಕ, ಸ್ವತಃ ಚಾಲಕ. ಸುಮಾರು ಐವತ್ತು ವರ್ಷಗಳ ಹಿಂದೆ ಲಾರಿಯ ಚಾಲಕರಾಗಿದ್ದರೆಂಬುದು ನಮ್ಮಲ್ಲನೇಕರಿಗೆ ಈಗ ಸುದ್ದಿ. ಆಗ ಪಡೆದ ಅನುಭವವನ್ನು ಮತ್ತೆ ಮತ್ತೆ ಜ್ಞಾಪಿಸಿಕೊಳ್ಳುತ್ತಾರೆ. ರಾತ್ರಿಯ ಹೊತ್ತು ಗುತ್ತಿಗಾರಿನ ಸಮೀಪದ ವಳಲಂಬೆಯಲ್ಲಿ ಲಾರಿ ಕೆಟ್ಟು ನಿಂತಿತು. ಕಗ್ಗತ್ತಲು. ಧಾರಾಕಾರ ಮಳೆ ಸುರಿಯುತ್ತಿತ್ತು. ಗಾಳಿ, ಗುಡುಗು, ಸಿಡಿಲು ಬೇರೆ. ಅಕ್ಕಪಕ್ಕದಲ್ಲಿ ಭಯಾನಕ ಕಾಡು. ಹತ್ತಿರ ಮನೆಗಳೆಲ್ಲೂ ಇಲ್ಲ. ಲಾರಿಯನ್ನು ಅಲ್ಲೇ ಬಿಟ್ಟು ಮಿತ್ರರೊಡನೆ ದೊಡ್ಡ ತೋಟದ ವರೆಗೆ ನಡೆದರು. ಅಲ್ಲಿ ಸ್ನೇಹಿತರು ಒದಗಿಸಿದ ಗಾಡಿಯನ್ನೇರಿ ಲಾಟೀನು ಬೆಳಕಿನಲ್ಲಿ ಸುಳ್ಯ ತಲಪುವಾಗ ಬೆಳಗಿನ ಜಾವ! ಅನೇಕ ಅನುಭಗಳಲ್ಲಿ ಇದೊಂದು. ಇಂಥ ಅನುಭವಗಳು ಇವರ ಜೀವನ ದೃಷ್ಟಿಯನ್ನು  ರೂಪಿಸುವಲ್ಲಿ ಪಾತ್ರವಹಿಸಿವೆ.

ಇತ್ತೀಚೆಗೆ ಇವರು ಸುಳ್ಯದ ಮಂಡಲ ಪ್ರಧಾನರಾಗಿದ್ದರು. ಸುಳ್ಯದ ಪ್ರಧಾನ ಅಂಚೆಕಚೇರಿಗೆ ಸ್ವಂತ ಕಟ್ಟಡ ನಿರ್ಮಿಸುವ ಪ್ರಸ್ತಾಪಕ್ಕೆ ಜೀವ ಬಂತು. ಅದಕ್ಕೆ ಮಂಡಲದ ಅನುಮತಿ ಬೇಕಿತ್ತು. ಹೆಚ್ಚು ದಿನ ಕಾಯುವಂತಿರಲಿಲ್ಲ. ಪ್ರಧಾನ ಬಾಲಕೃಷ್ಣ ಗೌಡರು ಸ್ವತಃ ಆಸಕ್ತಿ ವಹಿಸಿದರು. ವಿಳಂಬವಾಗದಂತೆ ನೋಡಿ ಕೊಂಡರು. ನಾವು ನಿರೀಕ್ಷಿಸಿದ ಸಮಯಕ್ಕಿಂತಲೂ ಮುಂಚಿತವಾಗಿ ಲೈಸೆನ್ಸು ಕೈಸೇರಿತು. ಇಂದಿನ ಸುಂದರ ಕಟ್ಟಡದ ಹಿನ್ನೆಲೆಯಲ್ಲಿ ಶ್ರೀಯುತರ ಹಸನ್ಮುಖದ ಪ್ರಯತ್ನವೂ ಇದೆ.

ಇವರು ಪ್ರಧಾನರಾಗಿದ್ದಾಗ ಮಂಡಲಕ್ಕೆ ಸುಸಜ್ಜಿತ ಕಾರ್ಯಾಲಯದ ನಿರ್ಮಾಣವಾಯಿತು. ಭೂ ಅಭಿವೃದ್ಧಿ ಬ್ಯಾಂಕಿನ ಅಧ್ಯಕ್ಷರಾಗಿದ್ದಾಗ ಬ್ಯಾಂಕಿಗೆ ಸುಂದರ ಕಟ್ಟಡವನ್ನು ನಗರದ ಹೃದಯ ಪ್ರದೇಶದಲ್ಲಿ ಕಟ್ಟಿಸಿದರು. ಇವರು ಶುದ್ಧ ಮನಸ್ಸಿನ, ಶುದ್ಧ ಹಸ್ತದ ಸಮಾಜ ಸೇವಕ.

"ನಮ್ಮಲ್ಲಿ ನೀಡುವ ಕೈಗಳಿಗೆ ಕೊರತೆಯಿಲ್ಲ. ಪಡೆದುಕೊಳ್ಳುವ ಕೈಗಳು ಶುದ್ಧವಾಗಿರಬೇಕು". ಇದು ಸಾರ್ವಜನಿಕ ಜೀವನದಲ್ಲಿ ಇವರು ಕಂಡ ಸತ್ಯ. ಪ್ರಾಮಾಣಿಕ ವ್ಯಕ್ತಿ ಸಾರ್ವಜನಿಕ ಕೆಲಸವನ್ನು ಪ್ರಾರಂಭಿಸಿದರೆ ಸಹಕಾರ ನೀಡಲು ಜನ ಮುಂದೆ ಬರುತ್ತಾರೆ. ತಾವು ಕೊಟ್ಟ ಹಣ ಸದ್ವಿನಿಯೋಗ ಆಗುವುದದರೆ ಸಹಾಯಕ್ಕೆ ಕೊರತೆಯಿಲ್ಲ. ಬಾಲಕೃಷ್ಣ ಗೌಡರಲ್ಲಿ ಸಾರ್ವಜನಿಕರು ಭದ್ರತೆಯನ್ನೂ ಸದ್ವಿನಿಯೋಗದ ಮಾದರಿಗಳನ್ನೂ ಕಂಡಿದ್ದಾರೆ.

ವ್ಯಕ್ತಿತ್ವದಂತೆ ಮಾತು. ವೇದಿಕೆ ದೊರೆಯಿತೆಂದು ಗಂಟೆಗಟ್ಟಲೆ ಮಾತುಗಳನ್ನು ಹೆಣೆಯುವುದು ಇವರ ಜಾಯಮಾನವಲ್ಲ. ಆ ಸಂದರ್ಭಕ್ಕೆ ಎಷ್ಟು ಪ್ರಸ್ತುತ ಅಷ್ಟನ್ನು ಮಾತ್ರ ಸ್ಪಷ್ಟಪಡಿಸುವ ಔಚಿತ್ಯ ಪ್ರಜ್ಞೆ ಇತರರಿಗೆ ಮಾದರಿ. ಅವರನ್ನು ಸಮಾರಂಭಗಳಿಗೆ ಆಹ್ವಾನಿಸಿದ ಅನುಭವ ನನಗಿದೆ. ಸಮಯಕ್ಕೆ ಸರಿಯಾಗಿ ಬಂದು ತಮ್ಮ ಪಾತ್ರವನ್ನು ನಿರ್ವಹಿಸುವ ರೀತಿಯಿಂದಾಗಿ ಅಭಿಮಾನಕ್ಕೆ ಪಾತ್ರರಾಗಿದ್ದಾರೆ.

ವ್ಯಾಪಾರ ಲಾಭಕ್ಕಾಗಿ, ಎಷ್ಟು ಲಾಭ ಮಾಡಬೇಕು? ವ್ಯಾಪಾರಕ್ಕೊಂದು ಮಾನವೀಯತೆ ಇರಬಾರದೇಕೆ? ಈ ದಿಕ್ಕಿನಲ್ಲಿ ಕಾರ್ಯಪ್ರವೃತ್ತರಾದವರು ಬಾಲಕೃಷ್ಣ ಗೌಡರು. ಗ್ರಾಹಕರ ಒಂದು ಬಳಗವೇ ಇವರಿಗಿದೆ. ಗ್ರಾಹಕರ ಯೋಗಕ್ಷೇಮ, ಬೇಕೆನಿಸಿದರೆ ಮಾರ್ಗದರ್ಶನ, ಆಯ್ಕೆಯಲ್ಲಿ ಸಹಾಯಕವಾಗಬಹುದಾದ ಮಾಹಿತಿ ಇವರಲ್ಲಿ ಲಭ್ಯ. ಕೇವಲ ವ್ಯಾಪಾರಿಗಳನ್ನು ಜನ ಮೆಚ್ಚಲಾರರು, ಲಾಭ ಬಡುಕರೆನ್ನುತ್ತಾರೆ, ಕೆಡುಕರೆನ್ನುವಂತೆ ನೋಡುತ್ತಾರೆ. ಸಹಾನುಭೂತಿಯುಳ್ಳ ಜೀವಪರರಾದ ಸಹಕಾರಿಗಳನ್ನು ಜನರು ಮರೆಯುವುದಿಲ್ಲ. ತಮ್ಮ ಕಷ್ಟ ಸುಖಗಳಲ್ಲಿ ಒಬ್ಬರೆಂದು ತಿಳಿಯುತ್ತಾರೆ. ಶ್ರೀ ಬಾಲಕೃಷ್ಣ ಗೌಡರು ಜನಾನುರಾಗಿಯಾಗಲು ಕಾರಣವೇನೆಂದು ಇನ್ನೂ ಹೆಚ್ಚಿನ ವಿವರ ಅನಗತ್ಯ.

# ಜನಮನದ ನಾಯಕ ವೀರಪ್ಪಗೌಡ

ಯು. ಸು. ಗೌ. ಗುತ್ತಿಗಾರು



ಇಂದು ನಮ್ಮ ಸಮಾಜ ಎಲ್ಲ ಕ್ಷೇತ್ರಗಳಲ್ಲಿ ಎದ್ದು ತೋರುವ ರೀತಿಯಲ್ಲಿ ಗುರುತಿಸಲ್ಪಡುತ್ತಿದೆ. ನಮ್ಮಲ್ಲಿ ನವಜೀವನದ ವಾಂಛೆ ಅಂಕುರಿಸಿ, ಹೊಸ ವಾತಾವರಣಕ್ಕೆ ತೆರೆದುಕೊಳ್ಳುವ ಉತ್ಸಾಹ ಮೂಡುತ್ತಿರುವುದು ಶುಭಸೂಚಕ. ಸುತ್ತಮುತ್ತಲಿನ ಜನವರ್ಗದ ಮಧ್ಯೆ ನಮ್ಮತನದ ಬದುಕನ್ನು ಸಾಗಿಸಲು ಸ್ವಾತಂತ್ರ್ಯ ಪೂರ್ವ ಮರೆಯಲಾಗದು. ನಮ್ಮ ಮುಂದೆ ದೀಪಧಾರಿಗಳಾಗಿ ಬೆಳಗಿದ ಮಹಾನ್ ಚೇತನಗಳ ಸ್ಮರಣೆ ಕಾಲೋಚಿತವೂ ಹೌದು. ಅಂಥವರಲ್ಲಿ ಕಳೆದ ಎರಡು ಶತಮಾನಗಳನ್ನು ಹಂಚಿಕೊಂಡು ಸುಮಾರು ಎಪ್ಪತ್ತೈದು ವಸಂತಗಳನ್ನು ಕಂಡ ಆದರ್ಶ ನೇತಾರ ದೇರಪ್ಪಜ್ಜನ ವೀರಪ್ಪಗೌಡರು (ದೇ. ವೀ. ಗೌ) ಚಾರಿತ್ರಿಕ ಸಾಧಕರಾಗಿ ಸ್ಮರಣೀಯರಾಗಿದ್ದಾರೆ.

ಸ್ವಾತಂತ್ರ್ಯ ಪೂರ್ವ ಮತ್ತು ಸ್ವಾತಂತ್ರ್ಯೋತ್ತರದ ಆರಂಭದ ದಿನಗಳು ನಮ್ಮ ಜನಾಂಗದ ಪಾಲಿಗೆ ಕಷ್ಟದ ದಿನಗಳು! ಬಡತನ, ಅವಿದ್ಯೆ, ರೋಗರುಜಿನ, ಶೋಷಣೆಗಳಿಂದ ಜರ್ಜರಿತವಾದ ಕಾಲಘಟ್ಟ. ನೊಂದಜೀವಗಳಿಗೆ ಸಾಂತ್ವನ ಹೇಳಿ ನೆರವಾಗಬಲ್ಲ ಮಹಾತ್ಮರಿಗಾಗಿ ಕಾದಿದ್ದ ಕಾಲ. ಸುದೈವಕ್ಕೋ ಎಂಬಂತೆ ಆ ಕಾಲದಲ್ಲಿ ಅನೇಕ ನೇತಾರರು ಕಾಣಿಸಿಕೊಂಡರು. ಅವರಲ್ಲಿ ದೇ. ವಿ. ಗೌಡರು, ಜನಾಂಗ ಬಹುಕಾಲ ನೆನೆಯುವಂಥ ಸಾಧನೆಗಳಿಂದ ಜನಜನಿತರಾದರು.

ದೇರಪ್ಪಜ್ಜನ ವೀರಪ್ಪಗೌಡರು ಜನಿಸಿದ್ದು 25ಜುಲೈ 1897ರಂದು. ತಂದೆ ಲಿಂಗಪ್ಪಗೌಡರು. ತಾಯಿ ಶ್ರೀಮತಿ ಸುಬ್ಬಕ್ಕ ಶಾಲೆಯಲ್ಲಿ ಓದಿದ್ದು ಕೇವಲ ನಾಲ್ಕನೆ ತರಗತಿ. ಆದರೆ ಜೀವನ ಶಾಲೆಯಲ್ಲಿ ಓದಿದ್ದು ಲೆಕ್ಕವಿಟ್ಟವರಿಲ್ಲ!! ಅಂದು ಅವಿಭಕ್ತ ಕುಟುಂಬಪದ್ಧತಿ ಚಾಲ್ತಿಯಲ್ಲಿದ್ದ ಸಮಯ. ತೀರ್ಥರೂಪರ ಕಾಲಾನಂತರ, ತನ್ನ 19ನೇ ವಯಸ್ಸಿಗೇ ದೊಡ್ಡ ಕುಟುಂಬದ ಹೊಣೆಗಾರಿಕೆ ಹೊರಬೇಕಾಗಿ ಬಂತು. ಆದರೂ ಧೃತಿಗೆಡದೆ ಎಲ್ಲವನ್ನೂ ಸುಸೂತ್ರವಾಗಿ ನಿರ್ವಹಿಸಿದರು.

ವ್ಯಕ್ತಿ ಸಮಾಜದ ಶಿಶು. ತನ್ನ ಅಭಿವೃದ್ಧಿಯಲ್ಲಿ ಆತ ಸಮಾಜದಿಂದ ಪೋಷಕ ದ್ರವ್ಯಗಳನ್ನು ಪಡೆಯಲೇಬೇಕು. ಹಾಗಾಗಿ ಸಮಾಜದ ಋಣವು ಆತನಿಗೆ ಇದ್ದೇ ಇದೆ. ವಿವೇಕಿಗಳಾದವರು ಈ ಬಗ್ಗೆ ಜಾಗೃತರಾಗಿ ತಮ್ಮ ಋಣಸಂದಾಯ ಮಾಡುವಲ್ಲಿ ಪ್ರಾಮಾಣಿಕರಾಗುತ್ತಾರೆ. ವೀರಪ್ಪಗೌಡರು ಈ ಸತ್ಯದ ಸಾಕ್ಷಾತ್ಕಾರಕ್ಕಾಗಿ ತನ್ನನ್ನು ಸಾಮಾಜಿಕ, ಶೈಕ್ಷಣಿಕ, ಸಹಕಾರಿ, ರಾಜಕೀಯ, ಧಾರ್ಮಿಕ, ಮುಂತಾದ ಕ್ಷೇತ್ರಗಳಲ್ಲಿ ತೊಡಗಿಸಿಕೊಂಡರು. ಇದರಿಂದ ಅವರ ಅನುಭವ ವಿಸ್ತಾರವಾಗಿ ಲೋಕಜ್ಞಾನ ಸಿದ್ಧಿಸಿತು. ಜೀವನದ ಸುದೀರ್ಘ ಪ್ರಯಾಣದಲ್ಲಿ ಎಲ್ಲಿಯೂ ಎಡವದೇ ಇಹಯಾತ್ರೆಯನ್ನು ಮುಗಿಸಿ (1972 ಜೂನ್ 1) ಜನಮನದಲ್ಲಿ ಅಮರರಾದರು.

ವಿ! ವೀರಪ್ಪಗೌಡರ ಜನ್ಮಶತಾಬ್ಧಿಯನ್ನು 1998 ಎಪ್ರಿಲ್ ತಿಂಗಳಿನಲ್ಲಿ ಅವರ ಕುಟುಂಬಸ್ಥರು, ಅಭಿಮಾನಿಗಳು, ಊರವರು ವಿಶೇಷವಾಗಿ ಆಚರಿಸಿ ಗೌರವ ಸಲ್ಲಿಸಿದ್ದಾರೆ. ಅವರ ಮೊಮ್ಮಗಳಾದ ಶ್ರೀಮತಿ ಲೋಕೇಶ್ವರಿ ವಿನಯಚಂದ್ರ ಇವರ ಸಂಪಾದಕತ್ವದಲ್ಲಿ 'ಕರ್ಮವೀರ ದೇ. ವೀ. ಗೌ' ಎಂಬ ಸಂಸ್ಮರಣೆ ಗ್ರಂಥವನ್ನು ಹೊರತರಲಾಗಿದೆ. ಸದ್ರಿ ಕೃತಿಯಲ್ಲಿ ವೀರಪ್ಪಗೌಡರನ್ನು ಹತ್ತಿರದಿಂದ ಬಲ್ಲ ಹಿರಿಯರು, ಕುಟುಂಬಸ್ಥರು, ಅಭಿಮಾನಿಗಳು ತಮ್ಮ ಅಭಿಪ್ರಾಯಗಳನ್ನು ಪ್ರಾಮಾಣಿಕವಾಗಿ ಲೇಖನಿಸಿದ್ದಾರೆ. ಗೌಡರ ಬಗ್ಗೆ ಇದೊಂದು ಅತ್ಯುತ್ತಮ ಆಕರ ಗ್ರಂಥವೂ ಹೌದು. ಇದರ ಸಾರ ಸಂಗ್ರಹವೇ ಈ ಲೇಖನ ಎನ್ನಬಹುದು.

**ಬದುಕು- ಸಾಧನೆ-ಸಂದೇಶ**

'ಸಹಕಾರಿ ರಂಗದ ಭೀಷ್ಮ' ನೆಂದೇ ಹೆಸರಾಗಿದ್ದ ಶ್ರೀ ಮೊಳಹಳ್ಳಿ ಶಿವರಾಯರ ಆಪ್ತ ಶಿಷ್ಯರಾಗಿದ್ದರು. ದೇ.ವೀ. ಗೌ. ಅವರ ಪ್ರೇರಣೆಯಿಂದ ಗುತ್ತಿಗಾರಿನಲ್ಲಿ ಸಹಕಾರಿ ಸಂಘ ಸ್ಥಾಪನೆಯಾಯಿತು. ವೀರಪ್ಪಗೌರಡು ಅದರ ಸ್ಥಾಪಕ ಅಧ್ಯಕ್ಷರಾಗಿ ಹಳ್ಳಿ ಹಳ್ಳಿಗೆ ಸಂಚರಿಸಿ ರೈತರನ್ನು ಹುರಿದುಂಬಿಸಿ, ಲಾಭಕೋರ ವ್ಯಾಪಾರಿಗಳಿಂದ ರಕ್ಷಿಸಿದರು. ಜಿಲ್ಲಾ ಕೃಷಿಕರ ಸಹಕಾರಿ ಮಾರಾಟ ಸಂಘದ ಗುತ್ತಿಗಾರಿನ ಏಜೆನ್ಸಿಯಾಗಿ, ಕೃಷಿಕರಿಗೆ ಮಂಗಳೂರಿನಲ್ಲಿ ಸಿಗಬಹುದಾದ ಸವಲತ್ತುಗಳನ್ನು ಊರಲ್ಲೇ ಒದಗಿಸಲು ಮನೆಯಲ್ಲೇ ಇಟ್ಟುಕೊಂಡು ಕೃಷಿಕರಿಗೆ ಈಡು ಸಾಲ ಒದಗಿಸುವ ವ್ಯವಸ್ಥೆಯನ್ನು ತಂದರು. ಅದೆಷ್ಟೋ ಕುಟುಂಬಗಳ ಆಸ್ತಿ ಸಾಲಕ್ಕೆ ಹರಾಜು ಆಗುವ ಸಂದರ್ಭದಲ್ಲಿ ಬೇರೆಯವರ ಹೆಸರಿನಲ್ಲಿ ಸಾಲ ತರಿಸಿ, ಆಸ್ತಿ ರಕ್ಷಿಸಿದ ಉದಾಹರಣೆಗಳು ದೇ. ವೀ. ಗೌಡರ ಬದುಕಿನಲ್ಲಿ ಸಾಕಷ್ಟಿವೆ. ಹೆಚ್ಚೇಕೆ? ಈ ಲೇಖನದ ಕುಟುಂಬವನ್ನೂ ಸಂದಿಗ್ಧ ಆರ್ಥಿಕ ಸ್ಥಿತಿಯಿಂದ ಪಾರು ಮಾಡಿದವರು ದೇ. ವೀ. ಗೌಡರು.

ಅವರು ಓರ್ವ ಪ್ರಗತಿಪರ ಕೃಷಿಕನೆಂದು ತಮ್ಮ ಕಾಲದಲ್ಲಿ ಗುರುತಿಸಿಕೊಂಡವರಾಗಿದ್ದರು. ನೇಜಿ, ಕೊಯ್ಲು, ಅಡಿಕೆ ಕೃಷಿ ಎಲ್ಲ ವಿಧಗಳಲ್ಲೂ ತಾನೇ ಸ್ವತಃ 'ಮುಟ್ಟಾಳೆ' ತೊಟ್ಟು ದುಡಿಯುತ್ತಿದ್ದರು, ಮುಂಚೂಣಿಯಲ್ಲಿರುತ್ತಿದ್ದರು. ಭತ್ತದ ಕೃಷಿಯಲ್ಲಿ ಉತ್ತಮ ಕೃಷಿಕನೆಂದು

ಸರಕಾರದಿಂದಲೂ ಬಹುಮಾನಿತರಾಗಿದ್ದರು. ಮುಂದೆ ಭತ್ತದ ಕೃಷಿಯಿಂದ ಆರ್ಥಿಕಾಭಿವೃದ್ಧಿ ಅಸಾಧ್ಯವೆಂದು ಕಂಡುಕೊಂಡು ಗೌಡರು, ಭತ್ತದಿಂದ ಅಡಿಕೆ, ಕಾಳುಮೆಣಸು, ಗೇರುಬೀಜಗಳಿಗೆ ತೊಡಗಿ ಕ್ರಾಂತಿ ತಂದರು.

ದೇ. ವೀ. ಗೌ. ಅಂದಿನ ಪುತ್ತೂರು ತಾಲೂಕು ಬೋರ್ಡ್ ಸದಸ್ಯರಾಗಿ ಆಯ್ಕೆಗೊಂಡು, ಬೋರ್ಡಿನಿಂದ ಊರಿಗೆ ಏನೆಲ್ಲ ಸವಲತ್ತು ಸಿಗಬಹುದೋ ಅದನ್ನೆಲ್ಲಾ ಪಡೆಯಲು ಪ್ರಯತ್ನಿಸಿದರು. ಅದು ಈಗಿನಂತೆ ವಾಹನ ಸೌಲಭ್ಯದ ಕಾಲವಲ್ಲ. ಹಳ್ಳಿಹಳ್ಳಿಗೆ ಕಾಲು ನಡಿಗೆಯೇ ದಾರಿ. ಗುತ್ತಿಗಾರಿನಿಂದ ಪಂಜ ತನಕ ನಡೆದು ಪುತ್ತೂರು ಸೇರಬೇಕಾಗಿದ್ದ ಕಾಲ. ಇಂದಿನಂತೆ ಕುಳಿತರೆ ನಿಂತರೆ ಭತ್ಯೆಗಳಿರಲಿಲ್ಲ; ಭಕ್ಷೀಸುಗಳಿರಲಿಲ್ಲ. ಸಮಾಜ ಸೇವೆಯೆಂದರೆ ಗೌಡರಿಗೆ ಮುಖವಾಡವಾಗಿರಲಿಲ್ಲ - ಅದೊಂದು ಧ್ಯೇಯವಾಗಿತ್ತು, ಉಸಿರಾಗಿತ್ತು. ಗೌಡರ ಸಾರ್ವಜನಿಕ ಜೀವನಕ್ಕೆ ಸಂದ ರಾಷ್ಟ್ರೀಯ ಮನ್ನಣೆಯನ್ನು ಇಲ್ಲಿ ಸ್ಮರಿಸಲೇಬೇಕು - 'ಗ್ರಾಮಾಭಿವೃದ್ಧಿಗಾಗಿ' ಅಂದಿನ ಪ್ರಧಾನಿ ನೆಹರೂರವರು ಕೊಡಮಾಡಿದ ಪ್ರಶಸ್ತಿ ದೇ.ವೀ.ಗೌ. ರವರಿಗೆ ನ್ಯಾಯೋಚಿತವಾಗಿ ದೊರೆಯಿತು - ಮದ್ರಾಸಿನಲ್ಲಿ ಪ್ರಶಸ್ತಿ ಪುರಸ್ಕಾರ ಸಮಾರಂಭದಲ್ಲಿ ಪಾಲ್ಗೊಂಡು, ಪ್ರಶಸ್ತಿಪತ್ರ ಮತ್ತು ರೂ. 1000/- ನಗದು ಬಹುಮಾನ ಸ್ವೀಕರಿಸಿದರು. ಸದ್ರಿ ಹಣವನ್ನು ವಿನಿಯೋಗಿಸಿ, ನಾಲ್ಕೂರು ಗ್ರಾಮದಲ್ಲಿ ಸಮಾಜ ಮಂದಿರವನ್ನು ಕಟ್ಟಿಸಿದರು. ಮುಂದೆ ಅವರ ಮಕ್ಕಳಾದ ಶ್ರೀ ರಾಮಪ್ಪಗೌಡರು ಮತ್ತು ಹೊನ್ನಪ್ಪ ಗೌಡರು ಸಮಾಜ ಮಂದಿರವನ್ನು ಗ್ರಾಮ ಪಂಚಾಯತ್ ಕಛೇರಿಗಾಗಿ ಬಿಟ್ಟುಕೊಟ್ಟಿರುವುದು ಇಲ್ಲಿ ಉಲ್ಲೇಖನೀಯ.

ದೇರಪ್ಪಜ್ಜನ ವೀರಪ್ಪಗೌಡರ ವ್ಯಕ್ತಿತ್ವದೊಂದಿಗೆ ಅವರ ನ್ಯಾಯತೀರ್ಮಾನ ಪಂಚಾಯ್ತಿಕೆಗಳು ಹಾಸುಹೊಕ್ಕಾಗಿವೆ- ತಮ್ಮ ನಿಷ್ಪಕ್ಷಪಾತ ತೀರ್ಮಾನಗಳಿಂದ ಮೂರುಗಳು ಕೋರ್ಟು, ಪೋಲೀಸ್ ಸ್ಟೇಷನ್‌ಗಳಿಗೆ ಹೋಗುವುದನ್ನು ತಪ್ಪಿಸಿದ್ದಾರೆ. ಇವರ ಪಂಚಾಯ್ತಿಕೆಯನ್ನು ಜನ ಎಷ್ಟು ಬಯಸಿದ್ದರು ಎಂದರೆ, ಇವರ ಬಿಡುವಿಗಾಗಿಯೇ ನಿಗದಿತ ದಿನವನ್ನು ಮುಂದೂಡುತ್ತಿದ್ದರು. ಅಥವಾ ಹಿಂದೂಡುತ್ತಿದ್ದರು! ಜಮೀನು ಪಾಲು ಪಟ್ಟಿ, ಸಂಬಂಧಿತ ಪಂಚಾಯ್ತಿಕೆಗಳು ಹಲವಾರು ದಿನಗಳೇ ನಡೆದದ್ದುಂಟು. ಕೊನೆಗೆ ಸಬ್ ರಿಜಿಸ್ಟ್ರಿ ಕಛೇರಿಯಲ್ಲಿ ದಾಖಲು ಮಾಡುವಲ್ಲಿ ತನಕ ಗೌಡರು ಹಾಜರಿರಬೇಕಾದ ಪ್ರಸಂಗಗಳೂ ಇವೆ.

ದ.ಕ. ಮತ್ತು ಕೊಡಗು ಗೌಡ ವಿದ್ಯಾಸಂಘದ ಅಧ್ಯಕ್ಷರಾಗಿ ಏಳು ವರ್ಷಗಳ ಕಾಲ ದುಡಿದ ಗೌಡರು, ದಿ| ಶ್ರೀ ಸಂಪಾಜೆ ಸಣ್ಣಯ್ಯ ಪಟೇಲರ ಅಸೌಖ್ಯದ ಅವಧಿಯಲ್ಲಿ ಉಪಾಧ್ಯಕ್ಷರಾಗಿಯೂ ಅಧ್ಯಕ್ಷರ ಕಾರ್ಯ ನಿರ್ವಹಿಸಿ ಒಟ್ಟು 12 ವರ್ಷಗಳ ಕಾಲ ನಮ್ಮ ಜನಾಂಗದ ನಾಯಕತ್ವ ವಹಿಸಿದ ದಾಖಲೆ ಇದೆ. ತಮ್ಮ ಜನಾಂಗದ ಮಕ್ಕಳ ವಿದ್ಯಾಭ್ಯಾಸ, ವಸತಿ ವ್ಯವಸ್ಥೆ, ನ್ಯಾಯ ತೀರ್ಮಾನಗಳು ಮತ್ತು ಒಗ್ಗಟ್ಟು ಇವುಗಳಿಗಾಗಿ ಆಸಕ್ತಿ ನಿಷ್ಠೆಯಿಂದ ದುಡಿದಿದ್ದಾರೆ.

ದೇ. ವಿ. ಗೌ ಅಪ್ಪಟ ಗಾಂಧೀವಾದಿ. ಅದು ಅವರ ಉಡುಪಿನಲ್ಲೂ, ಆಚಾರ ವಿಚಾರದಲ್ಲೂ ವ್ಯಕ್ತವಾಗುತ್ತಿತ್ತು. ತಾವು ಖಾದಿ ಬಟ್ಟೆ, ಖಾದಿ ಟೋಪಿ ಧರಿಸುತ್ತಿದ್ದರು. ಮಿತ ಸಂತಾನ, ಹಿಂದಿ ಪ್ರಚಾರ, ಚರಕಾ, ಪಾನನಿಷೇಧ, ಸ್ವದೇಶಿ ಜಾಗೃತಿ ಬಗ್ಗೆ ಪ್ರಬಲವಾಗಿ ಪ್ರತಿಪಾದಿಸುತ್ತಿದ್ದರು. ತನ್ನ ಸಂಪರ್ಕಕ್ಕೆ ಬಂದವರಿಗೆ ಸತ್ಯ, ಧರ್ಮ, ನ್ಯಾಯ ಬಗ್ಗೆ ಹಿತನುಡಿಯುತ್ತಿದ್ದರು. 'ರಘುಪತಿ ರಾಘವ ರಾಜಾರಾಂ', 'ಸತ್ಯ ಮೇವ ಜಯತೇ' ಆಗಾಗ ಬಾಯಿಯಲ್ಲಿ ಗುನುಗುತ್ತಿದ್ದರು. ಹೀಗೆ ಅವರ ವ್ಯಕ್ತಿತ್ವದ ವ್ಯಾಪ್ತಿ ಇನ್ನೂ ವಿಸ್ತಾರವಾಗುತ್ತ ಹೋಗುತ್ತದೆ. ಅದರ ಸಂಕ್ಷಿಪ್ತ ನೋಟವನ್ನಷ್ಟೇ ಸಂಗ್ರಹಿಸಲು ಪ್ರಯತ್ನಿಸಲಾಗಿದೆ.

**ವಾಸ್ತುತಜ್ಞ:** ಗೃಹನಿರ್ಮಾಣದಲ್ಲಿ ವಾಸ್ತುಜ್ಞಾನ ಗೌಡರಿಗಿತ್ತು ಅದರೊಂದಿಗೆ ಮಣ್ಣು ಅಳತೆ, ಮರದ ಅಳತೆ, ಕರಗತವಾಗಿತ್ತು.

**ಗಿಡಮೂಲಿಕಾ ತಜ್ಞ:** ಮೂಲಿಕಾ ವೈದ್ಯರಾಗಿದ್ದ ಇವರು ಕೆಂಪು, ವಾತ, ಕುರು ಬಾಪು ಇವುಗಳಿಗೆ ಉಚಿತ ಔಷಧಿಗಳನ್ನು ನೀಡುತ್ತಿದ್ದರು.

**ಅನ್ವೇಷಕ :** ಏನೇ ಹೊಸತು ಎಂದಾಕ್ಷಣ ವೀರಪ್ಪಗೌಡರಿಗೆ ಅದನ್ನು ಕೂಲಂಕುಷವಾಗಿ ತಿಳಿದುಕೊಳ್ಳುವ, ಹುಡುಕುವ ಕುತೂಹಲ. ಸಾಧ್ಯವಾದರೆ, ಹೊಸತನ್ನು ಬಳಕೆಗೆ ತರುವ ಯೋಜನೆ, ಯೋಚನೆ.

**ನೇರ ವ್ಯಕ್ತಿತ್ವ :** ತನಗೆ ಆಗದ್ದು ಕಂಡರೆ ಖಂಡಿಸುವ ಸ್ವಭಾವ. ಇವರ ಕೋಪ ಸಾತ್ವಿಕ ಸ್ವರೂಪದ್ದು. ಅದು ಹತೋಟಿ ಮೀರದು. ಇಲ್ಲಿ ತಪ್ಪಿತಸ್ಥರ ಮೇಲೆ ಹಗೆಯಿಲ್ಲ. ತಿದ್ದಿ ತೀಡುವ ಶಿಕ್ಷಣವಿತ್ತು.

**ಆಸ್ತಿಕ :** ಗೌಡರು ಆಗಾಗ ಮಹಾನ್ ದೈವಭಕ್ತರು. ಮನೆಯಲ್ಲಿ ಸಮುದಾಯ ಭವನದಲ್ಲಿ ಆಗಾಗ ಭಜನೆ, ಹರಿಕತೆ, ತಾಳಮದ್ದಳೆ, ಪ್ರವಚನಕೂಟಗಳನ್ನು ನಡೆಸುತ್ತಿದ್ದರು. ಶ್ರೀ ಸತ್ಯಸಾಯಿಬಾಬಾರ ಭಕ್ತರಾಗಿದ್ದು ಪುಟ್ಟಪರ್ತಿಯಲ್ಲಿ ಕೆಲಕಾಲ ವಾಸಿಸಿದ್ದರು.

**ವಿದ್ಯಾಪಕ್ಷಪಾತಿ :** 'ಶಿಕ್ಷಣದಿಂದ ಸುಧಾರಣೆ' ಎಂದು ಪ್ರಬಲವಾಗಿ ಪ್ರತಿಪಾದಿಸುತ್ತಿದ್ದ ಗೌಡರು, ಅದಕ್ಕಾಗಿ ದುಡಿದಿದ್ದಾರೆ ಕೂಡಾ. ಅವರೇ ನಡುಗಲ್ಲಿನಲ್ಲಿ ಸ್ಥಾಪಿಸಿದ ಶ್ರೀ ದುರ್ಗಾಪರಮೇಶ್ವರಿ ಖಾಸಗಿ ಎಲಿಮೆಂಟರಿ ಶಾಲೆ ಇದಕ್ಕೆ ಸಾಕ್ಷಿ (ಇದೀಗ ಸರಕಾರದ ಸ್ವಾಮ್ಯದಲ್ಲಿದೆ) ಗುತ್ತಿಗಾರಿನ ಹಿರಿಯ ಪ್ರಾಥಮಿಕ ಶಾಲೆಯ ಅಭಿವೃದ್ಧಿಯಲ್ಲಿ ಸಂಪೂರ್ಣವಾಗಿ ತೊಡಗಿಕೊಂಡು ಗುತ್ತಿಗಾರಿನಲ್ಲಿ ಪ್ರೌಢಶಾಲಾ ಸ್ಥಾಪನೆಗೆ ಮೊದಲು ಮುತುವರ್ಜಿ ವಹಿಸಿದ ಕೀರ್ತಿ ಇವರಿಗೆ ಸಲ್ಲುತ್ತದೆ. ಗುತ್ತಿಗಾರು ಹಿ. ಪ್ರಾ. ಶಾಲೆಗೆ ಇವರು ಕೊಡುಗೆಯಾಗಿ ನೀಡಿದ ಸುಂದರವಾದ ಧ್ವಜಸ್ತಂಭ, ಗೌಡರ ಶಿಕ್ಷಣ/ರಾಷ್ಟ್ರ ಪ್ರೇಮದ ಸಂಕೇತ.

**ಬೇಟೆಗಾರ :** ಕಾಡುಪ್ರಾಣಿಗಳಿಂದ ಬೆಳೆನಾಶವಾಗಿ ರೈತರಿಗೆ ಹಾನಿಯಾಗುತ್ತಿದ್ದ ಕಾಲದಲ್ಲಿ ಬಂದೂಕು ಹಿಡಿದು, 'ಅಪ್ರತಿಮ ಈಡುಗಾರ'

ಎನಿಸಿದ್ದರು. ಗೌಡರು.

ಪ್ರವಾಸಿಗ : ಲೋಕಜ್ಞಾನಕ್ಕಾಗಿ ಪ್ರವಾಸ ಮಾಡುವ ಹವ್ಯಾಸ ಗೌಡರಿಗಿತ್ತು. ಆಗಿನ ಕಾಲದಲ್ಲಿ ಇಡೀ ಭಾರತ ಪ್ರವಾಸ ಮಾಡಿದ ಪ್ರವಾಸಿಗ ಇವರು. ಪ್ರವಾಸದ ಅನುಭವಗಳನ್ನು ಲೇಖಕನಲ್ಲದಿದ್ದರೂ, ಇತರರಿಗೆ ಹೇಳುವ ಕಲೆಗಾರಿಕೆ ಇವರಿಗಿತ್ತು.

'ದೇರಪ್ಪಜ್ಜನ ವೀರಪ್ಪಗೌಡರು ಸ್ವಲ್ಪ ಹೆಚ್ಚು ಓದುತ್ತಿದ್ದರೆ ಮಂತ್ರಿ ಆಗ್ತಿದ್ರು' ಇದು ಅವರ ಬಗ್ಗೆ ಅವರ ತಲೆ ಮಾರಿನವರು ಹೇಳುವ ಮಾತು. ಈ ಮಾತು ಅಕ್ಷರಶಃ ಸತ್ಯ - ಅವರ ನಾಯಕತ್ವಕ್ಕೆ ಹಿಡಿದ ಕನ್ನಡಿ. ಮಂತ್ರಿಯಾಗದಿದ್ದರೇನು? ಮಂತ್ರಿಗಳು ಮಾಡದಿದ್ದ ಕಾರ್ಯಗಳನ್ನು ಊರಿಗಾಗಿ, ಸಮಾಜಕ್ಕಾಗಿ ಮಾಡಿದ್ದಾರೆ. ಅವರಂಥವರ ಬದುಕು ಸಾಧನೆಗಳು ಇಂದಿನವರಿಗೆ ಸ್ಫೂರ್ತಿಯಾಗಬೇಕು. ಇಂಥ ಸಮ್ಮೇಳನಗಳಲ್ಲಿ ಮತ್ತೆ ಮತ್ತೆ ದೇ.ವಿ. ಗೌ. ನೆನಪಾಗಬೇಕು. ಶ್ರೀಯುತರು ಮಕ್ಕಳೂ ಅವರಿಂದ ಪ್ರೇರಿತರಾಗಿದ್ದಾರೆ. ಮೊಮ್ಮಕ್ಕಳಾದ ಶ್ರೀಮತಿ ಲೋಕೇಶ್ವರಿ ವಿನಯಚಂದ್ರ, ಉದಯಕುಮಾರ್ ಮೊದಲಾದವರು ಸಾಮಾಜಿಕ ಜೀವನದಲ್ಲಿ ಕ್ರಿಯಾಶೀಲರಾಗಿದ್ದಾರೆ. ಶ್ರೀ ದೇ.ವಿ. ಗೌಡರು ಈ ಭೂಮಿಯಲ್ಲಿ ನಡೆದಾಡಿದ ಗುರುತು ಖಂಡಿತಾ ಅಳಿಯದು, ಅಳಿಯಬಾರದು.

- ವೀರಪ್ಪಗೌಡರಂಥ ಸದ್ಗುಣಸಂಪನ್ನರು ಈಗೀಗ ಕಡಿಮೆಯಾಗುತ್ತಿದ್ದಾರೆ.

  *- ಬಿ. ಎಂ. ಇದಿನಬ್ಬ, ಕವಿ ಮತ್ತು ಮಾಜಿ ಶಾಸಕರು*

- ವೀರಪ್ಪಗೌಡರನ್ನು ನೆನಪಿಸಿದಾಗ ಭಾರತದ ಅತ್ಯಂತ ಜನಪ್ರಿಯ ಪ್ರಧಾನಿ ಲಾಲ್ ಬಹಾದ್ದೂರ್ ಶಾಸ್ತ್ರಿಯವರ ನೆನಪಾಗುತ್ತದೆ.

  *- ಸಂಪಾಜೆ ದೇವಿ ಪ್ರಸಾದ್*

- ಅವರು ದುಶ್ಚಟಗಳಿಂದ ದೂರವಿದ್ದವರು. ತಪ್ಪು ಮಾಡಿದವರನ್ನು ನಿಷ್ಠುರವಾಗಿ ತಿಳಿಸಿ, ಸರಿಪಡಿಸುತ್ತಿದ್ದರು.

  *- ಎಸ್. ಮೇದಪ್ಪಗೌಡ, ನಿವೃತ್ತ ಶಿಕ್ಷಕರು*

- ವಾಸ್ತು ಶಿಲ್ಪವನ್ನು ಅರಿತಗೌಡರು ಎಷ್ಟೋ ಮನೆಗಳಿಗೆ ಕುಟ್ಟಿಹೊಡೆದು ಮನೆ ಕಟ್ಟುವರೇ ಬೇಕಾದ ಸಾಮಾಗ್ರಿಗಳ ಲೆಕ್ಕಾಚಾರವನ್ನು ಈಗೀಗ ಯಾವುದೇ ಇಂಜಿನಿಯರ್‌ಗಳಿಗೆ ಕಡಿಮೆ ಇಲ್ಲದಂತೆ ಹೇಳುತ್ತಿದ್ದರು. *- ಮುಂಡೋಡಿ ಬೆಳ್ಯಪ್ಪ ಗೌಡ*

- ಈ ಎಲ್ಲಾ ಸವಲತ್ತುಗಳನ್ನು ಊರು ಪಡೆಯಬೇಕಿದ್ದರೆ, ಅದಕ್ಕಾಗಿ ದುಡಿಯುವ ನಿಸ್ವಾರ್ಥ ಮನುಷ್ಯರೊಬ್ಬರ ಅವಶ್ಯಕತೆಯನ್ನು ಶ್ರೀಯುತ ವೀರಪ್ಪಗೌಡರ ಮೂಲಕ ದೇವರೇ ಪೂರೈಸಿದಂತಿತ್ತು. **- ಮಲ್ಲಾರ ಗಿರಿಯಪ್ಪ ಗೌಡ.**

- ವೀರಪ್ಪಗೌಡರ ಮಾರ್ಗದರ್ಶನದ ಫಲವಾಗಿ 1951 ಜೂನ್ 5ರಂದು ಪಂಜದಲ್ಲಿ ಹೈಸ್ಕೂಲ್ ಪ್ರಾರಂಭವಾಯಿತು. ಅವರು ಗುತ್ತಿಗಾರಿನಲ್ಲಿ 1964ರಲ್ಲಿ ಪ್ರಾಥಮಿಕ ಆರೋಗ್ಯ ಕೇಂದ್ರಕ್ಕೆ ಸರಕಾರದಿಂದ ಮಂಜೂರಾತಿ ದೊರಕಿಸಿ ಕೊಡುವಲ್ಲಿ ಯಶಸ್ವಿಯಾದರು.

**ಶ್ರೀ ಬಿ. ಸುಬ್ಬಯ್ಯ ಶೆಟ್ಟಿ, ಕೇನ್ಯ**

[ಆಕರ : 'ಕರ್ಮವೀರ ದೇ.ವೀ. ಗೌ' ಮೈತ್ರಿ ಪ್ರಕಾಶನ, ಗುತ್ತಿಗಾರು]



1955ನೇ ಇಸವಿಯಲ್ಲಿ ಸಮಾಜ ವಿಕಾಸ ಯೋಜನೆ ಮದರಾಸು ರಾಜ್ಯ. ಇವರ 'ಯೋಗಿ' 'ಅತ್ಯುತ್ತಮ ಗ್ರಾಮ ಮುಂದಾಳು ಯೋಗ್ಯತಾ ಪ್ರಶಸ್ತಿ'ಯನ್ನು ದೇ.ವೀ.ಗೌ.ರವರಿಗೆ ಮುಖ್ಯಮಂತ್ರಿ ಶ್ರೀ ಭಕ್ತವತ್ಸಲಂ ಇವರಿಂದ ವಿತರಣೆ.

# ಸ್ವಾತಂತ್ರ್ಯ ಸಮರೊಡು ಅಮ್ಮೆ ಮಲ್ಲಪ್ಪ

ಡಿ. ಜಿ. ನಡ್ಕ, ಪಡ್ಡಿನಂಗಡಿ

ಅಮ್ಮೆ ಮಲ್ಲಪ್ಪ ಕರ್ತುಲೇ...
ಕುಂಪಿನಿ ಸರಕಾರೊದ ಎದುರು ಉಂತುದು
ಗೆಲ್ತ್ಂಡಲಾ..... ಸೋಲ್ತರತ್ತ?
ಮಲ್ಲೆ ಅತ್ತ್ .... ಅಲ್ಲೆ ಅತ್ತ್
ನೀರ್ ಕಡಲ್ ಪೇರ್ ಕಡಲಾದ್ .... ಉರ್ಕಿಲೆಕ ! .....
ಈರೆ ಕೀರ್ತಿನ್? ..... ಬೆಳಗಾದ್ ಕೊರ್ಪೆ

ಉಂದು ಅಮ್ಮೆ ಗ್ರಾಮದ ಕುರಿಯಡಿತ್ತಾಯ ದೈವ ಲಕ್ಕಿದ್ ಉಂತಿನಾಗ ಪನ್ಪಿನ ನುಡಿಕಟ್ಟ್.

ಪಿರಾಕ್‌ಡ್ ಪಂಜಮಾಗಣೆದ ಎಣ್ಣ್ಮರು ಬೂಡುದ ದೇವ ಬಲ್ಲಾಳೆರೆನ ಆಡಳಿತದ ಆಜಿ ಗ್ರಾಮದ ಪೈಕಿ ಒಂಜಿ ಗ್ರಾಮ? ಅಮ್ಮೆ ಪಂಜ ಕೇಮರ ಬಲ್ಲಾಳೆರೆ ಬೊಮ್ಮೆಟಿ ಗ್ರಾಮ ಅಮ್ಮೆ ಗ್ರಾಮೊಗು ತಾಗ್‌ತ್ ಇತ್ತ್ಂಡ್. ಕ್ರಿ.ಶ. 1800 ನೇ ಇಸವಿಡ್ ಸುಲ್ತಾನರಸುಳೆ ಕೈರ್ದ್ ಇಂಗ್ಲೀಷೆರೆ ಕೈ ಸೇರ್‌ಂಡ್. ಇಂಗ್ಲೀಷೆರ್ ಅಮ್ಮೆ ಬೊಮ್ಮೆಟಿನ್ ಸೇರಿಸಾದ್ ಕಲ್ಮಡ್ಕ ಗ್ರಾಮ ಮಲ್ತೆರ್. ಅಪಗ ಕೆನರಾ ಜಿಲ್ಲೆದ ಉಪ್ಪಿನಂಗಡಿ ತಾಲೂಕುದ 110ನೇ ಗ್ರಾಮ? ಇತ್ತೆ ಸುಳ್ಯ ತಾಲೂಕುದ ಒಂಜಿ ಗ್ರಾಮ.

ಅಮ್ಮೆ ಗ್ರಾಮದ ಗುರಿಕಾರೆ .... ಮಲ್ಲಪ್ಪ ಗೌಡೆರ್. ಕೂಜು ಕೋಡುದ ಅಪ್ಪಯ್ಯ ಗೌಡೆರ್, ಕಟ್ಟೆ ಮನೆದ ಮಲ್ಲ... ಗುರಿಕಾರ್ಲು. ಮಲ್ಲಪ್ಪ ಗೌಡೆರ್ ಹಿರಿಯೆರ್, ವಿಜಯ ನಗರ ಪತನ ಆಯಿಬುಕ್ಕ, ಇಕ್ಕೇರಿ ನಾಯಕೆರೆ ಕಾಲೊಡು ಐಗೂರು ಸೀಮೆದ ಅಯ್ಯಪ್ಪ ನಾಡ್‌ರ್ದ್ ಅಮ್ಮೆಟ್ ನೆಲೆಯಾಯೆರ್ ಪಂಡ್‌ದ್..... ಪರಬೆರೆ ಜೋಳಿಗೆರ್ದ್ ಜೋಳಿಗೆಗ್ ಬತ್ತಿ ಸುದ್ದಿ.

ಕ್ರಿ.ಶ. 1837ನೇ ಕಾಲೊಡು ಅಮ್ಮೆ ಮಲ್ಲಪ್ಪ ಗೌಡೆರ್ ಕಲ್ಯಾಣ ಸ್ವಾಮಿನ ದಂಡ್‌ಗ್ ಸೇರ್ದ್ ಕಂಪೆನಿ ಸರಕಾರೊದ ಎದ್‌ರ್ ಹೋರಾಟ ಮಾಲ್ತೆರ್. ಅಂಚ ಅಮ್ಮೆ ಗ್ರಾಮೊದ ಕುರಿಯಡಿತ್ತಾಯ ಬೂತ, ಅಮ್ಮೆ ಮಲ್ಲಪ್ಪ ಕರ್ತುಲೆನ್ ಬೂತ ಲಕ್ಕಿದ್ ಉಂತಿನಾಗ ಲೆತ್ತ್‌ದ್ ಪನ್ಪಿ ನುಡಿಕಟ್ಟ್.

ಇಂಗ್ಲೀಷೆರ್ ದಾಸ್ಯೊ ರೂಪೊದ ಕಂದಾಯೊನು ಪಣವುತ ರೂಪೊಗು ಬದಲಾವಣೆ ಮಾಲ್ತೆರ್. ದೇವಸ್ಥಾನೊದ ಉಂಬಳಿ ಭೂಮಿನ್ ಬ್ರಿಟಿಷೆರ್ ತನ್ನ ಬೀಲ ಪತ್ತ್‌ದ್ ನೇಲುನಗ್‌ಲೆಗ್ ಕೊರ್ದು ಪಟ್ಟೆ ದಾಖಿಲ್ ಮಾಲ್ತ್‌ದ್ ಸರಕಾರೊದ ಕಜಾನೆ ದಿಂಜಾವೊಂಡೆರ್. ದೇವಸ್ಥಾನೊದ ಖರ್ಚಿಗ್ ವಾ ಲೆಕ್ಕುಗುಲಾ ತಿಕ್ಕಂತಿನಾ 'ತಸ್ದಿಕ್' ಪನ್ಪಿ ಪಣವು ಪಾಸ್ ಮಾಲ್ತೆರ್. ಜನತ ಕಣ್ಣ್ ಕಟ್ಟ್‌ದ್ ದೇವೆರೆಗ್ ದೋಸ ಮಾಲ್ತೆರ್. ಈ ಅನ್ಯಾಯ ತೆರಿನ ಕೆದಂಬಾಡಿ ರಾಮಯ್ಯೆ ನ್ಯಾಯೊಗು ಬೋಡಾದ್ ಶಾಂತಿಡ್ ಹೋರಾಡಿಯೆರ್. ಫಲ ತಿಕ್ಕ್‌ಜಿ.

'ವಿಜಯ ನಗರದರಸುಳು, ಇಕ್ಕೇರಿದ ನಾಯಕೆರ್, ಕೊಡಗ್‌ದ ಅರಸುಳು.... ದೇವಸ್ಥಾನೊಗು ಉಂಬಳಿ ಬುಡುದಿತ್ತಿನ ಭೂಮಿನ್, ಮೈಸೂರುದ ಸುಲ್ತಾನರಸುಳು ಕೂಡ ಮಾನ್ಯ ಮಾಲ್ತೆರ್. ಅಂಡ.... ಈ ತರಂಗ ಶಾಮಿಲ್ ಪೂರಾ........ ಪೂಜಿತ್ ಕಟ್ಟಿರತ್ತೇ?' ಪಂಡ್‌ದ್ ಕೆದಂಬಾಡಿ ರಾಮಯ್ಯ ಗೌಡೆರ್ ಪೊತ್ತುನ ಸುವ್ವೇ...... ಆಯೆರ್. ರಾಮಯ್ಯ ಗೌಡೆರ್, ಮಡಿಕ್ಕೇರಿಗ್ ಪೋದು ಕಲ್ಯಾಣ ಸ್ವಾಮಿನ ಜೋಸ್ತಿ ಮಾಲ್ತ್‌ದ್ ಸುಳ್ಯೊರ್ದ್ ದಂಗೆ ಲಕ್ಕೊಡು ಪಂಡ್‌ದ್ ಕಲ್ಯಾಣ ಸ್ವಾಮಿನ್ ಲಕ್ಕಾದ್ ಪಾಡ್ಯೆರ್.

ಕೊಡಗ್‌ಡ್ದ್ ಬತ್ತಿನ ರಾಮಯ್ಯ ಕೂಜುಕೋಡು ಅಪ್ಪಯ್ಯ ಗೌಡೆರೆ ಮುಕಾಮುಕಿಡ್ ಅಮರ ಸುಳ್ಯೊದ ಗ್ರಾಮ ಮಾಗಣೆದ ಜನ್ನನೆರೆನ್ ದಂಗೆಗ್ ಪರ್ಚಿ ಕಟ್ಟಿಯೆರ್. ಈ ಸಂದರ್ಭೊಡು ರಾಮಯ್ಯರೆಗ್ ತಿಕ್ಕಿನಾರ್ ಅಮ್ಮೆ ಮಲ್ಲಪ್ಪ ಗೌಡೆರ್. ಅಮ್ಮೆ ಮಲ್ಲಪ್ಪ ಗೌಡೆರೆ ಚಲಾಕ್, ಧೈರ್ಯ ಸಾಹಸ ತೆರಿನ ರಾಮಯ್ಯ ಗೌಡೆರ್ ತನ್ನ ದಂಗೆದ ಮಲ್ಲ ಬಂಟೆ ಆದ್ ನೇಮಕ ಮಾಲ್ತೊಂಡೆರ್. ಸುಳ್ಯೊಡ್ ನಾಲ್ ಕಜೆತ ಜನೊಲು ದಂಗೆಗ್ ಒಂಜಾದ್ ಸೇರ್ಯೆರ್. ಕಲ್ಯಾಣ ಸ್ವಾಮಿಗ್ ದಂಗೆದ ಪಟ್ಟ ಕಟ್ಟೆರ್. ಕಲ್ಯಾಣ ಸ್ವಾಮಿ ಜಿಸಿಲೆ ಘಾಟಿದ ಪರಿಚಯ ಇತ್ತಿನ ಕೂಜುಕೋಡು ಅಪ್ಪಯ್ಯ ಗೌಡ್ರೆನ್ ಜಿಸಿಲೆ ಘಾಟಿಗ್ ಕಡಪುಡುದು .... ಮಲ್ಲಪ್ಪ ಗೌಡ್ರೆನ್ ಅರೆ ಬಟ್ಟೊಗು ಬುಡಿಯೆರ್.

ಕಲ್ಯಾಣಪ್ಪನ ದಂಡ್ ಕುಡಲಾಗ್ ಪಿದಾಡ್ನಗ.... ಅಪ್ಪಯ್ಯ ಗೌಡೆರ್, ಮಲ್ಲಪ್ಪ ಗೌಡೆರ್ ಜಿಸಿಲೆ ಘಾಟ್‌ದ ಕಡೆ ಲಕ್ಕೆರ್. ಆ ಕಾಲೊಡು ಸಂಪಾಜೆ ಘಾಟಿದ ಸಾದಿ (ಮಾರ್ಗ) ಇಜ್ಜಾಂಡ್. ಕುಡಲದ ದಂಗೆದ ಸುದ್ದಿ ತಿಕ್ಕಿನಾಗ ಕೊಡಗ್‌ದ ಬೊಳ್ಳು ಮುಸುಂಟುದ ಇಂಗ್ಲೀಷೆರ್ ತುಳು ನಾಡ್‌ಗ್ ಬರುವೆರ್. ಕುದುರೆ ಸವಾರಿಡೇ ಬರುವೆರ್. ಅಯಿಕೊಂಜಿ ಪೊಸಾ... ಗೊಬ್ಬು ಮಾಲ್ತೆರ್. ಮಲ್ಲ ಮಲ್ಲ ಬೆದ್‌ರಕುತ್ತಿ

ಮಾಲ್ತ್‌ದ್ ಕುದುರೆ ಬರ್ಪಿ ಸಾದಿಡ್ ಕವುಂತುದು..... ದೀಡಿಯೆರ್. ಕುತ್ತಿ ತೋಜಾಂದಿಲೆಕ ಬಜಿಕಿರೆ ದೆಂಗ್‌ದ್ ಕುಳ್ಳೆರ್. ಕುಡಲಾದ ದಂಗೆದ ಸುದ್ದಿ ಮಡಿಕ್ಕೇರಿದ ಸಿಪಾಯಿಲೆಗ್ ಗೊತ್ತಾದ್ ಕೊಡಗ್ ಜತ್ತ್‌ದ್ ಕುಡಲಾದ ಕಡೆ ಜತ್ತೊಂದು ಬತ್ತೆರ್. ಕುದುರೆಲ್ ಬರಾಸ್‌ಡ್ ಬನ್ನಗ ಜೆಪರಕುತ್ತಿಲೆಗ್ ಕಾರ್ ಪಾಡ್ಡ್ ಕಂಕಾನಿ ಮಲಂಕಾನಿ ಬುರ್ಕ. ಆ ಪೊರ್ತುಗು ನಮ್ಮ ಸಿಪಾಯಿಲೆ ಕಲ್ಲ್‌ದ ಕತ್ತಿದ ಪೆಟ್ಟ್‌ಗ್ ಇಂಗ್ಲೀಷ್ ಸಿಪಾಯಿಲ್ ಮಣ್ಣ್ ಮುಕ್ಕೆರ್. ಮಲ್ಲಪ್ಪ ಗೌಡೆರೆ ಗೊಬ್ಬು ಫಲ ಕೊರೊಂದು ದುಂಬುಗು ಘಟ್ಟ ಬರ್ತ್‌ದ್ ಸರಕಾರಿ ಕಛೇರಿ, ದಾಸ್ತಾನ್ ಉಗ್ರಣೊಲೆನ್ ವಶ ಮಲ್ತೊಂಡೆರ್. ಕುಡಲಡ್ ಜಯ ತಿಕ್ಕಿನ ಕಲ್ಯಾಣಪ್ಪ ದಂಡ್ ಸಂತೋಷೊಡು ಉಪ್ಪುನಾಗ, ತಲಚ್ಚೇರಿರ್ದ್ ಬತ್ತಿನ ಇಂಗ್ಲೀಷೆರೆ ಮಲ್ಲ ದಂಡ್ ರತಾ ರಾತ್ರಿಡ್ ಮೋಸೊಡು ಧಾಳಿ ಮಲ್ತ್‌ದ್ ನಮ್ಮ ನಾಯಕೆರ್ನ್ ಸೆರೆ ಪತ್ತೆರ್.

ಈ ಸುದ್ದಿ ಮಡಿಕ್ಕೇರಿಗ್ ತಿಕ್ಕಿನಾಗ ಅಪ್ಪಯ್ಯ ಗೌಡೆರೆ, ಮಲ್ಲ ಮಲ್ಲಪ್ಪ ಗೌಡೆರೆ ಸೂಟೆದ ಬೊಳಕ್‌ದ್ ನೀರ್ ಮಯ್ಯಿಲೆಕಾಂಡ್. ಎಲ್ಯ ದಂಡ್ ದಾಲ ಮಾಲ್ಪಿಲೆಕ ಇಜ್ಜಾಂತೆ ಪೋಂಡ್. ಆತ್ಮ ಧೈರ್ಯ ಕರಗ್‌ದ್ ನೀರಾಂಡ್. ಅಮ್ಮೆ ಮಲ್ಲಪ್ಪ ಗೌಡೆರ್ ತನ್ನ ಇಲ್ಲಾಡೆಗ್ ಬತ್ತೆರ್. ದೆಂಗ್‌ದ್ ಏತೋ ಸಮಯ ಕಾಲ ಕರಿತ್ತೆರ್. ಸೆರೆತಿಕ್ಕಿನ ದಂಗೆದ ವೀರೆರ್ನ್ ಕುಡಲದ ಬಿಕರ್ನಕಟ್ಟೆಡ್ ಗಲ್ಲು ಶಿಕ್ಷೆಗ್ ಒಳಪಡಿಸಾಯೆರ್. ಪಾ ಸತ್ಯೊನೊ! .... ಕುರಿಯಡಿತ್ತಯ ಭೂತದ ಸತ್ಯೊಂದ್‌ಲಾ ಪಂಡೊದಿತ್ತೆರ್‌ಗೆ ಮಲ್ಲಪ್ಪ ಗೌಡೆರ್. ಪಿಲಿತ್ತ ಬಾಯಿರ್ದ್ ತತ್ತ್‌ದ್ ಪೋಯೆರ್ ದುಂಬುಗು .... ಕಾಡ್‌ರ್ದ್ ನಾಡ್‌ಗ್ ಜತ್ತ್‌ದ್ ಬೇಸಾಯ ಮಾಲ್ತೊಂದಿತ್ತೆರ್. ಸುಮಾರ್ ಈ ಶತಮಾನೊದ ಆದಿಡ್... ಈ ಕುಟುಂಬದ ಕರಿಯಪ್ಪ ಗೌಡೆರ್ ಪೋಲೀಸ್ ಚಾಕರಿಗ್ ಸೇರ್ಯೆರ್. ಉದ್ಯೋಗ ಬುಡಿ ಬುಕ್ಕ ತನ್ನ ಅಮ್ಮೆದ ಬೇಸಾಯದ ಭೂಮಿನ್ ಮಾರ್ದ್ ಏನೆಕಲ್ಲ್ ಸಣ್ಣ ಕೋಟೆಗ್ ಒಕ್ಕೆಲ್ ಪೋಯೆರ್.

ಕರಿಯಪ್ಪ ಗೌಡೆರೆ ಮಗೆ ಲಾವಪ್ಪ ಗೌಡೆರ್ ಅಮ್ಮೆ ಕಟುಂಬೊದ ವರ್ಚಸ್‌ಡ್ ಕಾರ್ಬಾರ್ ಮಾಲ್ತಿನಾರೆ. ಅರೆ ಕಾಲೊಲಾ... ಕರೀಂಡ್. ಆರೆನ ಮೆಗಿ ನಾಗಪ್ಪ ಗೌಡೆರ್ ಪಿರಾಯೊದ ಪರಬೆ ಆತ್ ಉಳ್ಳೆರ್. ಆರೆನ ಮಗೆ ಕುಡಲಾಡ್ ಪೋಲೀಸ್ ಚಾಕ್ರಿಗ್ ಸೇರ್ದೆರ್. ತುಳುನಾಡ್ ವೀರೆರ್ ಸ್ವಾತಂತ್ರ್ಯ ಸಮರೊಡು ಮಲ್ಲಪ್ಪೆರ್ ಜೀವೊಗು ಜೀವಕೊರ್ದು ಕಾದಾಡಿನಾರ್ಂದ್ ತೆರಿಯರೆ ?.....

ಆರೆನ ಭೂತದ ಸಂದಿ, ಆರೆ ಇಲ್ಲಾಲ್ ಇತ್ತಿನ ದಂಡ್‌ದ ಕತ್ತಿ ಅಡ್ಡಣ, ಎನ್ನ ತಮ್ಮಲೆ ಆಕ್ರಿಕಟ್ಟೆ ಹುಕ್ರಪ್ಪ ಗೌಡೆರ್ ಪಣ್ಪತಿನ ದಂಗೆದ ಕತೆ. ಸಣ್ಣ ಕೋಟೆಡ್ ಇತ್ತಿನ ಆರೆನ ವಂಶದಗ್‌ಲೆಡಮಾಲ್ತಿನ ಪಾತೆರ ಕತೆ ಪಂಚಾತಿಗೆ, ದಂಗೆದ ಕತೆಡ್ ಬರ್ಪಿನ ಮಲ್ಲಪ್ಪ ಗೌಡೆರೆ ಸಾಹಸ ಕತೆ. ಈತ್ ಮಾಂತ ಬೊಳಕ್ ಕೊರ್ಪುಂಡು. ಮಲ್ಲ ಗೌಡೆರೆ ಪಿರಾವುದ - ದುಂಬುದ ಕತೆನ್ ಆಯಿನಾತ್ ಅರ್ತಿದ್ ಜನತ ದುಂಬು ದೀತೆ. ●

– ಕೃಪೆ ಕರ್ನಾಟಕ ತುಳು ಸಾಹಿತ್ಯ ಅಕಾಡಮಿ, ಮಂಗಳೂರು

*ಕುಡಿಮಿಂಚು*

ಹೆಜ್ಜೆ ಮೂಡದ ಹಾದಿಯಲ್ಲಿ ನಡೆ ಮಗನೆ
ಸದ್ದು ಮಾಡದ ಗೆಜ್ಜೆ ಕಟ್ಟಿ ಕುಣಿ ಮಗಳೆ
ಬುದ್ಧಿ ಹೇಳಿದ ನಿಂತು ಮಕ್ಕಳಿಗೆ ಮುದಿ ತಂದೆ
ಕಂಬಳಿಯ ಹೊದ್ದು ಮೇಯಿಸುತ ಕುರಿ ಮಂದೆ

ಮೂಡ ಬಾನಲಿ ಬೆಳ್ಳಿ ಪಡುಗಡಲ ತಂಗಾಳಿ
ದನಿಗೊಡಲು ಮುಂಜಾವ ಗೂಡ ಮುಂಗೋಳಿ
ನೆನಪು ನೇಗಿಲ ನೆಳೆದು ಉಳಿದ ಗೆರೆ ಮೇಲೆ
ಬರೆವವರು ಬರಬಹುದು ಇಂದಲ್ಲ ನಾಳೆ

–ಕಾಜಾಣ

# ಕಾಣೆಚ್ಚಾರಿನ ಸಮಾಜಸೇವಕ ಸುಬ್ಬಣ್ಣ ಗೌಡ

✍ ಲಿಂಗಪ್ಪ ಗೌಡ, ವಿಟ್ಲ



ಗೌಡ ಸಮಾಜದ ಕಟ್ಟು ಮನೆಗೆ ಸೇರಿದ ಏಳು ಮಾಗಣೆಗಳಲ್ಲಿ ಕನ್ಯಾನವೂ ಒಂದಾಗಿತ್ತು. ಶ್ರೀ ಸುಬ್ಬಣ್ಣ ಗೌಡರ ಅಜ್ಜ ಕಾಣೆಚ್ಚಾರು ತಿಮ್ಮಪ್ಪ ಗೌಡರು ಮಾಗಣೆ ಗೌಡರಾಗಿ ಸಮಾಜದಲ್ಲಿ ಮತ್ತು ಊರಿನಲ್ಲಿ ಸಾಕಷ್ಟು ಹೆಸರು ಗಳಿಸಿದ್ದರು. ಅವರ ಯಜಮಾನಿಕೆಯ ಕಾಲದಲ್ಲಿ ಮನೆಯಲ್ಲಿ ಸುಮಾರು ಎಪ್ಪತ್ತೈದು ಮಂದಿ ಒಟ್ಟಾಗಿ ವಾಸವಾಗಿದ್ದು, ಊರಿನ ಹಲವು ಕಡೆ ಗದ್ದೆ, ತೋಟ, ಗೇಣಿಸ್ಥಳ, ಹಲವು ಜೊತೆ ಜಾನುವಾರುಗಳು, ಹಲವು ಕಂಬಳಗಳಲ್ಲಿ ಗದ್ದೆ ಓಟದ ಕೋಣಗಳಿದ್ದು, ತುಂಬು ಸಂಸಾರವಾಗಿತ್ತು. ಅಜ್ಜನ ನಿಧನ ನಂತರ ಶ್ರೀಯುತರ ತಂದೆ ಕಾಣೆಚ್ಚಾರು ದಿ. ತುಕ್ರಪ್ಪ ಗೌಡ ತಾಯಿ ದಿ. ಲಕ್ಷ್ಮೀಯವರ ಸುಪುತ್ರರಾಗಿ ದಿನಾಂಕ 9-5-1927 ರಲ್ಲಿ ಜನಿಸಿದರು ಇವರ ತಂದೆಯ ಯಜಮಾನಿಕೆಯಲ್ಲಿ ಗ್ರಾಮದ 'ಕಾಣೆಚ್ಚಾರು ದೊಡ್ಡ ಮನೆ' ಎಂದು ಹಸರು ಪಡೆಯಿತು.

ಎಳೆ ಮಗುವಾಗಿರುವಾಗಲೇ ತಾಯಿಯ ಅಕಾಲ ಮರಣದ ಅನಿವಾರ್ಯತೆಯಿಂದ ಅವರ ತಂದೆ ಮರು ಮದುವೆಯಾದರು.

ಬಾಲ್ಯದಲ್ಲೇ ಶ್ರೀ ಸುಬ್ಬಣ್ಣ ಗೌಡರು ತಾಯಿಯನ್ನು ಕಳೆದುಕೊಂಡಿದ್ದರಿಂದ ತನ್ನ ತಾಯಿಯ ತವರು ಮನೆಯಲ್ಲಿದ್ದು ಅಲ್ಲಿಯ ಕೆದಿಲ ಪ್ರಾಥಮಿಕ ಶಾಲೆಯಲ್ಲಿ, ನಂತರ ಕನ್ಯಾನದ ಹಿರಿಯ ಪ್ರಾಥಮಿಕ ಶಾಲೆಯಲ್ಲಿ ತದನಂತರ ಆಗಿನ ಬ್ರಿಟಿಷ್ ಕಾಲದ ದ.ಕ. ಜಿಲ್ಲೆಗೆ ಸೇರಿದ್ದ ನೀಲೇಶ್ವರ ಅಥವಾ ಈಗಿನ ಕೇರಳದ ನೀಲೇಶ್ವರದ ರಾಜೇಶ್ ಹೈಸ್ಕೂಲಿನಲ್ಲಿ, ಬೋರ್ಡಿಂಗ್‌ನಲ್ಲಿ ತಂಗಿ ಮೆಟ್ರಿಕ್ ಓದಿದರು. ಯುದ್ಧ ಮತ್ತು ಆಹಾರ ಧಾನ್ಯಗಳ ಕೊರತೆ ನೀಗಿಸಲು ಕನ್ಯಾನದಲ್ಲೂ ಪಡಿತರ ಅಂಗಡಿ ಸ್ಥಾಪನೆ ಆದಾಗ, ಅಲ್ಲಿ ಗುಮಾಸ್ತರಾಗಿ ಸೇರಿಕೊಂಡರು.

ಅದೇ ಸಮಯದಲ್ಲಿ ಗ್ರಾಮ ಲೆಕ್ಕಿಗರ ಪರೀಕ್ಷೆ ಪಾಸ್ ಮಾಡಿ ನಂತರ ಭೂ ಸರ್ವೇಕ್ಷಣೆ ತರಬೇತಿಯನ್ನು ಯಶಸ್ವಿಯಾಗಿ ಪೂರೈಸಿದರು. ಮುಂದೆ ಮಂಗಳೂರಿನಲ್ಲಿ ಎರಡು ವರ್ಷದ ಅಧ್ಯಾಪಕ ವೃತ್ತಿ ತರಬೇತಿಯನ್ನು ಪ್ರಥಮ ದರ್ಜೆಯಲ್ಲಿ ತೇರ್ಗಡೆ ಹೊಂದಿ ಬಂಟ್ವಾಳ ತಾಲೂಕಿನ ನೂಜಿಬೈಲು ಹಿರಿಯ ಪ್ರಾಥಮಿಕ ಶಾಲೆಯಲ್ಲಿ ಅಧ್ಯಾಪಕ ವೃತ್ತಿಯನ್ನು ಕೈಗೊಂಡರು. 1982ರಲ್ಲಿ ಉತ್ತಮ ಸೇವೆ ಮಾಡಿ ಸೇವೆಯಿಂದ ನಿವೃತ್ತಿ ಪಡೆದರು. ಪಿತ್ರಾರ್ಜಿತವಾಗಿ ಬಂದ ಆಸ್ತಿಯೊಂದಿಗೆ ವಿಟ್ಲ ಪಡ್ನೂರು ಗ್ರಾಮದ ಪೂರ್ಲಪ್ಪಾಡಿ ಎಂಬಲ್ಲಿ ನೆಲೆ ನಿಂತು ಕೃಷಿ ಚಟುವಟಿಕೆಗಳಲ್ಲಿ ನಿರತರಾದರು. ಜೀವನದಲ್ಲಿ ಅನೇಕ ಏರು ಪೇರುಗಳನ್ನು ಕಂಡರೂ ಕಷ್ಟ ಸಹಿಷ್ಣುವಾಗಿದ್ದ ಇವರು ತಮ್ಮ ಅನುಭವಗಳ ಪಕ್ವತೆಯಿಂದ ಊರ ಹಾಗೂ ಸಮಾಜದ ಮಂದಿಗೆ ಮಾರ್ಗದರ್ಶಕರಾದರು.

ಕತೆ, ಕಾದಂಬರಿ, ಚಾರಿತ್ರಿಕ, ಪೌರಾಣಿಕ ಕಥೆ, ನಾಟಕಗಳು ಅವರ ಆಸಕ್ತಿಯ ಹವ್ಯಾಸಗಳು. ಜ್ಯೋತಿಷ್ಯದ ವಿಷಯದಲ್ಲಿ ಅಮಿತ ಆಸಕ್ತಿಯಿಂದಾಗಿ ಇವುಗಳ ಆಳವಾದ ಅಧ್ಯಯನ ಮಾಡಿ ಇತರರಿಗೆ ಹೇಳಲಾರಂಭಿಸಿದರು. ಜಾತಕ, ಸಾಮುದ್ರಿಕ, ಜಲಶಿಲ್ಪ, ವಾಸ್ತುಶಿಲ್ಪ ಮುಂತಾದವುಗಳಲ್ಲಿ ಅಪರಿಮಿತ ಜ್ಞಾನ ಹೊಂದಿದರು. ಈ ವಿಷಯಗಳಲ್ಲಿ ಜನರ ಸಮಸ್ಯೆಗಳನ್ನು ಯಾವುದೇ ಫಲಾಪೇಕ್ಷೆಗಳಿಲ್ಲದೆ ಪರಿಹರಿಸುತ್ತಾರೆ.

ಜಲಶಿಲ್ಪ ವಿಚಾರಕ್ಕೆ ಭೂಮಿಯ ಮಣ್ಣಿನ ಮಾದರಿ, ಜಲಸಸ್ಯಗಳು, ಮರಗಿಡಗಳ ಬಾಗಿದ ಕೊಂಬೆಗಳ ದಿಕ್ಕು, ಭೂಮಿಯ ಏರು ತಗ್ಗು ಪರಿಶೀಲನೆಗಳಿಂದ ಕೆರೆ, ಬಾವಿ ತೋಡಲು ಯೋಗ್ಯ ಸ್ಥಳವನ್ನು ಸೂಚಿಸುತ್ತಾರೆ.

ಹಿಂದಿನ ಕಾಲದಲ್ಲಿ ತಮ್ಮ ಮಕ್ಕಳನ್ನು ಶಾಲೆಗೆ ಸೇರಿಸಲು ಜಾತಕ ಅಥವಾ ತಾಲೂಕು ಆಫೀಸಿನಿಂದ ಮಗುವಿಗೆ ಜನನ ದೃಢಪತ್ರಿಕೆ ಬೇಕಾಗುತ್ತಿತ್ತು. ಹಿಂದಿನ ಕಾಲದಲ್ಲಿ ಹೆತ್ತವರು ಇದೆಲ್ಲಾ ನಮ್ಮಿಂದ ತುಂಬ ಕಷ್ಟ ಸಾಧ್ಯವೆಂದು ಹಿಂದೆ ಸರಿಯುತ್ತಿದ್ದುದರಿಂದ ಆ ಮಕ್ಕಳ ಭವಿಷ್ಯ ಹಾಳಾಗುತ್ತಿತ್ತು. ಅಂತಹ ಸಂದರ್ಭಗಳಲ್ಲಿ ಶ್ರೀಯುತರು ಅವರಿಗೆ ಸಹಾಯವಾಗಿ ಜಾತಕ ಮಾಡಿಕೊಡುತ್ತಿದ್ದರು. ಇದಕ್ಕಾಗಿ ಅವರು ಹೆತ್ತವರಲ್ಲಿ ಮಗುವಿನ ಜನನ ಸಮಯದಲ್ಲಿ ಊರಲ್ಲಿ ಯಾವ ಜಾತ್ರೆ, ನೇಮ-ಪೂಜೆ ನಡೆದಿತ್ತು ಎಂಬುದನ್ನು ತಿಳಿದು ಆ ಲೆಕ್ಕಾಚಾರದಿಂದ ಮತ್ತು ಪಂಚಾಂಗದ ಸಹಾಯದಿಂದ 'ಕೋಟ ನಾಳ' ಮಾಡಿ ಮಗುವನ್ನು ಸೇರಿಸಲು ಸಹಾಯವಾಗಿದ್ದರು.

ಸಾಮುದ್ರಿಕಾ ವಿಚಾರವಾಗಿ ಹಸ್ತ ಸಾಮುದ್ರಿಕ, ಅಂಗ ಸಾಮುದ್ರಿಕಾ, ದೇಹ ಸಾಮುದ್ರಿಕ ಈ ಮೂರೂ ವಿಷಯಗಳ ಆಧಾರದಿಂದ ಹೇಳುತ್ತಾರೆ. ಅನೇಕರಿಗೆ ಇವರು ಹೇಳಿದಂತೆಯೇ ಒಳ್ಳೆಯ ಸಂತಸದ ಸಂದರ್ಭಗಳನ್ನು ಎದುರಿಸುವ ಯೋಗ ಬಂದಿರುತ್ತದೆ. ಅಂತೆ ಇನ್ನು ಕೆಲವರಿಗೆ ಇವರಂದಂತೆ ಕೆಟ್ಟ ಪರಿಸ್ಥಿತಿಯನ್ನೂ ನಿಭಾಯಿಸುವ ಸಂದರ್ಭಗಳು ಬಂದಿವೆ.

ವಾಸ್ತುಶಿಲ್ಪಕ್ಕೆ ಸಂಬಂಧಿಸಿದಂತೆ ಇವರು ಗೃಹ, ಕೊಟ್ಟಿಗೆ ಆಯ, ಸ್ಥಳ, ದಿಕ್ಕು ಪರಿಶೀಲನೆ ಮತ್ತು ಕೃಷಿ ಭೂಮಿಯಲ್ಲಿ ನೀರ ಹರಿವಿನ ದಿಕ್ಕು ಮೊದಲಾದುವುಗಳ ಬಗ್ಗೆ ನಿರ್ದೇಶನ ನೀಡುತ್ತಾರೆ.

ಹೀಗೆ ವಿವಿಧ ಕ್ಷೇತ್ರಗಳಲ್ಲಿ ಜನರಿಗೆ ನೆರವಾದ ಶ್ರೀಯುತ ಸುಬ್ಬಣ್ಣಗೌಡರು ದ.ಕ. ಜಿಲ್ಲೆಯಲ್ಲಿ ಅಲ್ಲದೇ ನೆರೆಯ ಕಾಸರಗೋಡು. ಕೊಡಗು. ಉಡುಪಿಜಿಲ್ಲೆಯ ಸರ್ವಜನಾಂಗದ ಸಾವಿರಾರು ಜನರಿಗೂ ತಮ್ಮ ವಿದ್ಯೆಯ ಉಪಯೋಗವನ್ನು ಫಲಾಪೇಕ್ಷೆಯಿಲ್ಲದೆ ನೀಡಿದ್ದಾರೆ. ತಮ್ಮ ಈ ಇಳಿ ವಯಸ್ಸಿನಲ್ಲೂ ಈ ರೀತಿಯಾಗಿ ಸಮಾಜದ, ಜನರ ಊರಜನರ ಪರವಾಗಿ ನಿಸ್ವಾರ್ಥ ಸೇವೆ ಸಲ್ಲಿಸುತ್ತಿರುವ ಶ್ರೀಯುತರಿಗೆ ಭಗವಂತನು ದೀರ್ಘ ಆಯುರಾರೋಗ್ಯ, ಸುಖ, ಶಾಂತಿ, ಸಮೃದ್ಧಿಯನ್ನು ಕರುಣಿಸಲೆಂದು ಹಾರೈಸೋಣ.

# ಆದರ್ಶ ಶಿಕ್ಷಕ ರಾಮಚಂದ್ರ ಗೌಡ

ಲಿಂಗಪ್ಪ ಗೌಡ, ವಿಟ್ಲ



ಹೆಸರು : ಜಿ.ರಾಮಚಂದ್ರ ಗೌಡ

ಜನನ : 10-3-1931

ತಂದೆ : ಜಿ.ಗೋವಿಂದ ಗೌಡ

ತಾಯಿ : ಶ್ರೀಮತಿ ದೇವಕಿ

ವಿಳಾಸ : ರಾಯಿಗ್ರಾಮ, ಬಂಟ್ವಾಳ ತಾಲೂಕು.

1954 ರಿಂದ 1989 ರವರೆಗೆ ಶಿಕ್ಷಕರಾಗಿ ಸೇವೆಸಲ್ಲಿಸಿದ್ದಾರೆ.ಇವರಿಗೆ ಯಕ್ಷಗಾನ, ನಾಟಕ,ಭಕ್ತಿಗೀತೆ, ಪ್ರಬಂಧ ರಚನೆ ಮುಂತಾದ ಸಾಹಿತ್ಯ ಚಟುವಟಿಕೆಗಳು ಹವ್ಯಾಸವಿದೆ. ಇವರು ಬರೆದ 'ಜರಾಸಂಧ ವಧೆ' 'ಕರ್ಣಾವಸಾನ' ಮೊದಲಾದ ಯಕ್ಷಗಾನಗಳು, ಮತ್ತು 'ಮಕ್ಕಳ ಮನಸ್ಸು ಅದೆಷ್ಟು ನಿರ್ಮಲ' ಎಂಬ ನಾಟಕ ಆಕಾಶವಾಣಿಯಲ್ಲಿ ಹಲವಾರು ಬಾರಿ ಪ್ರಸಾರಗೊಂಡಿವೆ.

ಇವರು ಮಿತಭಾಷಿ ಗಂಭೀರ ಪ್ರವೃತ್ತಿ ಶಿಸ್ತು ಸ್ವಭಾವದವರು.

ಕೇವಲ ಕಿರಿಯ ಪ್ರಾಥಮಿಕವಾಗಿದ್ದ ಕೈಲ ಶಾಲೆ ಇವರ ಸೇವಾವಧಿಯಲ್ಲಿ ಮಾದರಿ ಹಿರಿಯ ಪ್ರಾಥಮಿಕ ಶಾಲೆಯಾಗಿ ಭಡ್ತಿಹೊಂದಿ ಮುಖ್ಯೋಪಾಧ್ಯಾಯ ರಾಗಿ 1989 ರ ತನಕ ದುಡಿಯುವ ಅವಕಾಶ ದೊರೆತಿದೆ.

ಶಾಲೆಯ ಭೌತಿಕ ಅಭಿವೃದ್ಧಿಗಳ ಜತೆಯಲ್ಲಿ ಮಕ್ಕಳ ಮನಸ್ಸನ್ನರಿತು ಅವರ ಪುರೋಭಿವೃದ್ಧಿಯ ಚಿಂತನೆ ನಡೆಸಿ, ಶಾಲೆಯೇ ದೇಗುಲ ಮಕ್ಕಳೇ ದೇವರು ಎಂಬಂತೆ ನಡೆಯುತ್ತಿದ್ದರು.

ಶಾಲೆಗೆ ವಿದ್ಯುತ್ ಬೆಳಕು, ತರಗತಿ ಕೋಣೆಗಳ ನಿರ್ಮಾಣ, ಪೀಠೋಪಕರಣ,ಸುಂದರ ರಂಗಮಂಟಪ,ಆಟದ ಬಯಲಿನ ವಿಸ್ತರಣೆ, ಶಾಲಾ ಹೂತೋಟ, ನೀರಿನ ವ್ಯವಸ್ಥೆ, ಶಾಲೆಗೆ ಸುತ್ತಲಿನ ಆವರಣ ಇತ್ಯಾದಿಗಳ ನಿರ್ಮಾಣ ಇವರ ಮುತುವರ್ಜಿಯಲ್ಲಿ ಆಗಿವೆ. ಮಕ್ಕಳಲ್ಲಿರುವ ಸುಪ್ತ ಪ್ರತಿಭೆಗಳನ್ನು ಹೊರತರಲು ಹಲವಾರು ರಚನಾತ್ಮಕ ಕಾರ್ಯಕ್ರಮಗಳನ್ನು ಹಮ್ಮಿಕೊಂಡಿದ್ದರು. ಮಕ್ಕಳಿಗೆ ಸಣ್ಣ ಉಳಿತಾಯ ಯೋಜನೆ, ಬಡ ಹಾಗೂ ಅಂಗವಿಕಲರ ಕ್ಷೇಮ ನಿಧಿ. ಮೊದಲಾದ ಯೋಜನೆಗಳನ್ನು ಯಶಸ್ವಿಗೊಳಿಸಿದ್ದರು. ವಯಸ್ಕರ ಶಿಕ್ಷಣ, ಬಡ ಜನರಿಗೆ, ವಿಧವೆಯರಿಗೆ ಸರಕಾರದಿಂದ ದೊರೆಯುವ ಸವಲತ್ತುಗಳನ್ನು ದೊರಕಿಸಿ ಕೊಡಲು ಶ್ರಮಿಸಿದ್ದಾರೆ.

1978 ರಲ್ಲಿ ತಾಲೂಕು ಮಟ್ಟದ ಉತ್ತಮ ಶಿಕ್ಷಕ ರಾಗಿ 1985 ರಲ್ಲಿ ಜಿಲ್ಲಾಮಟ್ಟದ ಅತ್ಯುತ್ತಮ ಶಿಕ್ಷಕರಾಗಿ 1986 ರಲ್ಲಿ ರಾಜ್ಯ ಶಿಕ್ಷಕ ಪ್ರಶಸ್ತಿಗಳಿಗೆ ಭಾಜನರಾಗಿದ್ದಾರೆ. ಗೌಡ ಜನಾಂಗದ ಹೆಮ್ಮೆಯ ಪುತ್ರರಾಗಿದ್ದಾರೆ.

*ಕುಡಿಮಿಂಚು*

ಎನ್ನ ಅಜ್ಜೆರೆ ಅಜ್ಜೆ ಮಾಮಲ್ಲ ಕಾರ್‌ಭಾರಿ
ಕಟ್ಟೊಂದಿತ್ತರ್‌ಗೆ ದಿನೊ ನೂತ್ತೊಂಜಿ ಕೋರಿ
ಆರೆ ಅಪ್ಪೆನ ಅಪ್ಪೆನವು ಎಲ್ಯತ್ತ್ ಮನಸ್
ಒಂಜಿ ಕೋರಿಡೆ ಸಾರೊ ಜನೊಕೊರೊನೆ ಒಣಸ್

ಮದ್ಮೆ ಆತಿನಿ ತೂಲೆ ಕೋಡೆತ್ತ್ ಮುರನಿ
ಪಣ್ಪೆ ಬುಡೆದಿಗ್ ಪೊಸತ್ ಬುದ್ಧಿ ಕಂಡಾನಿ
ನಿನ್ನ ಅಮ್ಮೆರ್ ಕೊರಿನ ಪಾತೆರೊರಿತೊನೊಡು
ಇಜ್ಜ್ಯಂಡ ಕನಲ ನಿನ್ನಪ್ಪೆನ ಕಂಟ ಸರೊನೂ

–ಕಾಜಾಣ

# ಶಿಕ್ಷಣದ ಹರಿಕಾರ ಶ್ರೀ ಕುರುಂಜಿಯುವರು

**ಸಂವಾದ ಬರಹ: ಪೂವಪ್ಪ ಕಣಿಯೂರು**
**ಸಹಕಾರ: ಪ್ರೊ. ಕೆ.ವಿ. ದಾಮೋದರ ಗೌಡ**

ದಕ್ಷಿಣ ಕನ್ನಡ ಜಿಲ್ಲಾ ಗೌಡರ ಸಂಘ ಅಸ್ತಿತ್ವಕ್ಕೆ ಬಂದು ಇಪ್ಪತ್ತೈದು ವರ್ಷಗಳು ಸಂದ ಸಂದರ್ಭದಲ್ಲಿ, ಅದರ ಬೆಳ್ಳಿಹಬ್ಬದ ಪ್ರಯುಕ್ತ ಹೊರತರುವ ಗೌಡ ಜನಾಂಗದ ಕುರಿತಾದ ಆಕರ ಗ್ರಂಥದಲ್ಲಿ, ಗೌಡ ಜನಾಂಗದ ಮೇರು ವ್ಯಕ್ತಿತ್ವ ಹೊಂದಿರುವ, ಶ್ರೀ ಕುರುಂಜಿ ವೆಂಕಟರಮಣ ಗೌಡರ ಕಾಣ್ಕೆಗಳನ್ನು (visions) ದಾಖಲಿಸುವುದು ಬಹಳ ಮುಖ್ಯ. ಯಾಕೆಂದರೆ ಅವರ ಕಾಣ್ಕೆಗಳು ಅನನ್ಯವಾದವುಗಳು. ಎಲ್ಲಾ ಜನಾಂಗಗಳಿಗೂ ಮಾದರಿ ಮಾರ್ಗದರ್ಶಕವಾಗಬಲ್ಲವು.

ಯಾರಿಗೂ ಯಾತಕ್ಕೂ ಬೇಡವಾಗಿದ್ದ ಸುಳ್ಯದ ಕುರುಂಜಿಗುಡ್ಡೆ ಇಂದು ದೇಶ ವಿದೇಶಗಳಿಗೂ ವಿಸ್ತರಿಸಿಕೊಂಡಿರುವುದು ಆಶ್ಚರ್ಯ ಮತ್ತು ವಿಸ್ಮಯವನ್ನು ತಂದುಕೊಡುತ್ತದೆ. ಮುಳ್ಳುಕಂಟಿಗಳಿಂದ ಕೂಡಿದ್ದ ಈ ಕುರುಂಜಿಬೆಟ್ಟ ಇಂದು ವಿದ್ಯಾನಗರ ಕುರುಂಜಿ ಬಾಗ್ ಎಂದು ಪರಿವರ್ತನೆಗೊಂಡಿದೆ. ಇದಕ್ಕೆ ಬಹುಮುಖಿ ವ್ಯಕ್ತಿತ್ವದ ಶ್ರೀ ಕುರುಂಜಿಯವರ ಸೃಷ್ಟಿಶೀಲ ಮನೋಧರ್ಮ ಕಾರಣವಾಗಿದೆ. ಮರುಭೂಮಿಯಲ್ಲೂ ಕೃಷಿ ಮಾಡಬಲ್ಲೆ ಎನ್ನುವ ಕೃಷಿಕ ಮನೋಬಲದ ಶ್ರೀ ಕುರುಂಜಿಯವರನ್ನು ಈ ಬರಹದಲ್ಲಿ ಪ್ರಸ್ತುತಪಡಿಸುವುದು ಕಷ್ಟಸಾಧ್ಯವೆನ್ನುವ ಮಿತಿ ಇದ್ದೇ ಇದೆ. ಹಾಗಾಗಿಯೂ ಶ್ರೀ ಕುರುಂಜಿಯವರ ವ್ಯಕ್ತಿತ್ವದ ಭಿನ್ನ ನೆಲೆಗಳನ್ನು ಅವರದ್ದೇ ಆದ ಅಭಿಪ್ರಾಯಗಳ ಮೂಲಕ ಮುಂದಿಡುವ ಪ್ರಯತ್ನವನ್ನು ಇಲ್ಲಿ ಮಾಡಲಾಗಿದೆ. ಆ ಕಾರಣಕ್ಕಾಗಿ ಅವರೊಂದಿಗೆ ಸಂವಾದವನ್ನು ನಡೆಸಲಾಯಿತು. ಸಂವಾದದಲ್ಲಿ ವ್ಯಕ್ತವಾದ ಅಭಿಪ್ರಾಯಗಳನ್ನು ಸಂಗ್ರಹಿಸಿ ಇಲ್ಲಿ ನಿರೂಪಿಸಲಾಗಿದೆ. ಶ್ರೀ ಕುರುಂಜಿಯವರು, ಬಹುಮುಖ್ಯವಾಗಿ ಶೈಕ್ಷಣಿಕ, ಸಾಮಾಜಿಕ, ಸಾಂಸ್ಕೃತಿಕ, ಧಾರ್ಮಿಕ ಕ್ಷೇತ್ರಗಳ ಮೂಲಕ ತಮ್ಮನ್ನು ತೊಡಗಿಸಿಕೊಂಡವರು ಮತ್ತು ತನ್ನ ಪರಿಸರದ ಎಲ್ಲಾ ಸಮುದಾಯಗಳ ಪ್ರಗತಿಗೆ ಕಾರಣರಾದವರು. ಆಲೋಚನೆ ಮತ್ತು ಯೋಜನೆಗಳನ್ನು ಅನುಷ್ಠಾನಗೊಳಿಸಿದವರು. ಈ ಕುರಿತಂತೆ ಸಂವಾದವನ್ನು ಏರ್ಪಡಿಸಿದಾಗ, ಅವರು ಬಹಳ ಮುಕ್ತವಾಗಿ ಮುಚ್ಚುಮರೆಯಿಲ್ಲದೆ ಬಿಚ್ಚುನುಡಿ ಯಲ್ಲಿ ತಮ್ಮ ಅಭಿಪ್ರಾಯಗಳನ್ನು ವ್ಯಕ್ತಪಡಿಸುತ್ತಾರೆ. ಅಷ್ಟರ ಮಟ್ಟಿಗೆ ಶ್ರೀ ಕುರುಂಜಿಯವರದ್ದು ಸರಳ ಸಜ್ಜನಿಕೆಯ ವ್ಯಕ್ತಿತ್ವ.

ಶ್ರೀ ಕುರುಂಜಿ ವೆಂಕಟ್ರಮಣ ಗೌಡರನ್ನು ಇಂದು ಸಮಾಜ ಸ್ಮರಿಸುವುದು ಅವರೊಬ್ಬ ಶಿಕ್ಷಣದ ಹರಿಕಾರ ಎಂಬ ಕಾರಣಕ್ಕಾಗಿ. ಈ ಕ್ಷೇತ್ರದಲ್ಲಿ ಏಕಾಂಗಿಯಾಗಿ ಅವರು ಸಾಧಿಸಿದ ಸಾಧನೆ ಅಪಾರವಾದುದು. ಈ ಕುರಿತಾಗಿ ಅವರನ್ನು ಮಾತನಾಡಿಸಿದಾಗ ಅವರಿಂದ ವ್ಯಕ್ತವಾಗುವ ಅವರ ಜೀವನದ ಪೂರ್ವ ಇತಿಹಾಸ ವಿಸ್ಮಯವನ್ನುಂಟುಮಾಡುತ್ತದೆ. ಮೂಲತಃ ರೈತ ಕುಟುಂಬದಿಂದ ಬಂದ ಮಣ್ಣಿನ ಮಗನೊಬ್ಬ ಶಿಕ್ಷಣ ಸಂಸ್ಥೆಗಳನ್ನು ಕಟ್ಟುತ್ತೇನೆನ್ನುವ ಕನಸು ಕಾಣುವುದು ಕೂಡ ಅಸಾಧ್ಯದ ಮಾತು. ಆದರೆ ಶ್ರೀ ಕುರುಂಜಿಯವರು ಆ ಕನಸನ್ನು ಕಂಡದ್ದು ಮಾತ್ರವಲ್ಲ ಅನುಷ್ಠಾನಕ್ಕೂ ತಂದಿದ್ದಾರೆ. ಇದು ಅತಿಶಯವಲ್ಲ, ಕುರುಂಜಿ ಬಾಗ್‌ಗೆ ಒಮ್ಮೆ ಬಂದರೆ ಅದು ವಾಸ್ತವವೆಂದು ಮನದಟ್ಟಾಗುತ್ತದೆ. ಈ ಬಗೆಯ ಇಚ್ಛಾಶಕ್ತಿಗೆ ಪ್ರೇರಕವಾದ ಮೂಲವನ್ನು ಸವಿವರವಾಗಿ ಅವರೇ ಹೇಳುತ್ತಾರೆ ಮತ್ತು ಅದನ್ನು ಮನಸಾ ಆನಂದಿಸುತ್ತಾರೆ.

ನನ್ನ ಬದುಕಿನಲ್ಲಿ ೧೯೪೧-೪೨ರ ಕಾಲ ಬಹಳ ಕಷ್ಟಕರವಾದುದು. ನಮ್ಮ ತಂದೆಯವರಾದ ಶ್ರೀ ಮಾಲಿಂಗ ಗೌಡರು ಐದು ರೂಪಾಯಿ ಸಂಬಳ ಪಡೆಯುತ್ತಿದ್ದ ಪ್ರೈಮರಿ ಸ್ಕೂಲ್ ಮಾಸ್ತರರಾಗಿದ್ದರು. ಆಗ ನಮ್ಮ ಕುಟುಂಬಕ್ಕೆ ಊಟಕ್ಕೆ ಬೇಕಾದ ಭತ್ತ ಮತ್ತು ಅರ್ಧ ಖಂಡಿ ಅಡಿಕೆ ಬೆಳೆ ಮಾತ್ರ ಇದ್ದದ್ದು. ೧೯೪೧ರಲ್ಲಿ ನಮ್ಮ ತಂದೆಯವರು ತೀರಿಕೊಂಡಾಗ ಜೀವನ ಕಷ್ಟವಾಯಿತು. ತಾಯಿಯ ಅಣ್ಣಂದಿರಾದ ಶ್ರೀ ರಾಮಣ್ಣ ಗೌಡ, ಶ್ರೀ ನಾರಾಯಣ ಗೌಡ ಇವರುಗಳು ನಮ್ಮ ಪೋಷಣೆ ಮಾಡಿದರು. ನಾವು ಸೋಣ್ಣೆಯಿಂದ ಹೊರಟವರು. ಬಂಧುಗಳಾದ ಸೂಂತೋಡು ಅಣ್ಣಪ್ಪ ಗೌಡರಿಂದ ನೂರು ರೂಪಾಯಿ ಸಹಾಯ ಪಡೆದು ಸಣ್ಣ ವ್ಯಾಪಾರ ಆರಂಭಿಸಿದೆವು. ೧೯೪೮ರಲ್ಲಿ ಸ್ವಲ್ಪ ದೊಡ್ಡ ಪ್ರಮಾಣದಲ್ಲಿ ವ್ಯಾಪಾರ ಮಾಡಿ ಸ್ವಲ್ಪ ಮಟ್ಟಿಗೆ ಸ್ಥಿತಿವಂತರಾದೆವು. ಹೀಗೆ ಆರ್ಥಿಕವಾಗಿ ಸುಧಾರಿಸಿಕೊಂಡ ಬಳಿಕ ನಾನು ೧೯೫೪ರಲ್ಲಿ ಕಾಂಗ್ರೆಸ್ ಬ್ಲಾಕ್ ಅಧ್ಯಕ್ಷನಾದೆ. ಹಾಗೆ ಡಿ.ಡಿ.ಸಿ ಸದಸ್ಯನಾಗಿ ಮತ್ತು ೧೯೫೭ರಲ್ಲಿ ಎಂ.ಪಿ.ಸಿ.ಸಿ. ಸದಸ್ಯನಾಗಿ ದಕ್ಷಿಣ ಕನ್ನಡ ಜಿಲ್ಲೆಯ ಬೇರೆ ಬೇರೆ ಕಡೆಗಳಿಗೆ ಭೇಟಿ ಕೊಡುವ ಸಂದರ್ಭ ಬಂತು. ಆಗ ನನಗೆ ಹೋದಲ್ಲಿ, ಬಂದಲ್ಲಿ ಕಂಡದ್ದು ಅಜ್ಞಾನ, ಬಡತನ. ಆಗ ನನಗೆ ಇದಕ್ಕೆಲ್ಲ ಒಂದೇ ಒಂದು ಔಷಧಿಯೆಂದರೆ ಶಿಕ್ಷಣ ಎನ್ನುವ ಜ್ಞಾನೋದಯವಾಯಿತು. ಅಂದು ನಾನು ಶಾಲೆಗಳನ್ನು ತೆರಯಬೇಕೆಂದು ಮಾಡಿದ ಸಂಕಲ್ಪ ಇಂದು ಸಾಕಾರಗೊಂಡಿದೆ. ೧೯೪೯ರಲ್ಲಿ ಸುಳ್ಯದಲ್ಲಿ ಹೈಸ್ಕೂಲ್ ತೆರೆಯುವ ಪ್ರಯತ್ನದಲ್ಲಿ ನಾನು ಮಹತ್ತರ ಪಾತ್ರ ವಹಿಸಿದೆ. ಇದರಲ್ಲಿ ನಾನು ಸಂಕಲ್ಪಿಸಿದ ಕಾರ್ಯ ಆರಂಭವಾಯಿತು. ಇದು ಸುಳ್ಯದಲ್ಲಿ ಈ ವರ್ಷದಿಂದ ಆರಂಭವಾದ ವೈದ್ಯಕೀಯ ಕಾಲೇಜಿನ ಸ್ಥಾಪನೆಯವರೆಗೆ ನಿರಂತರವಾಗಿ ನಡೆಯಿತು ಎನ್ನುವಾಗ ಶ್ರೀ ಕುರುಂಜಿಯವರು ಸಂತೃಪ್ತಿಯ ನಗೆ ಚೆಲ್ಲುತ್ತಾರೆ.

ಸುಳ್ಯದಲ್ಲಿ ನೆಹರು ಮೆಮೋರಿಯಲ್ ಕಾಲೇಜನ್ನು ಮೊದಲು ಸ್ಥಾಪಿಸಿದಾಗ ಇದ್ದ ಸುಳ್ಯ ಪರಿಸರಕ್ಕೂ ಇವತ್ತು ಕಾಣುವ ಸುಳ್ಯ ಪರಿಸರಕ್ಕೂ ಅಜಗಜಾಂತರ ವ್ಯತ್ಯಾಸವಿದೆ. ಈ ಬದಲಾವಣೆ ಯಲ್ಲಿ ಪ್ರಗತಿಯ ಗತಿ ಇದೆ. ಈ ಕುರಿತಾಗಿ, ಕುರುಂಜಿಯವರನ್ನು ಪ್ರಶ್ನಿಸಿದರೆ ಈ ಬದಲಾವಣೆಯಲ್ಲಿ ತಮ್ಮ ಪಾತ್ರವನ್ನು ಪ್ರಧಾನವೆಂದು ಗುರುತಿಸಿ ಉತ್ತರಿಸುತ್ತಾರೆ.

ಸುಳ್ಯದಲ್ಲಿ ನಾವು ೧೯೭೬ರಲ್ಲಿ ನೆಹರು ಮೆಮೋರಿಯಲ್ ಕಾಲೇಜನ್ನು ಸ್ಥಾಪಿಸುವ ಮೊದಲು ಸುಳ್ಯದ ಯುವಜನತೆ ಪದವಿ ಓದಬೇಕಾದರೆ ಮಂಗಳೂರಿಗೋ, ಮಡಿಕೇರಿ, ಹಾಸನಗಳಿಗೊ ಹೋಗಬೇಕಿತ್ತು. ಇದು ಎಲ್ಲರಿಗೂ ಸಾಧ್ಯವೇ? ಹಣವಿದ್ದ ಮೇಲ್ವರ್ಗದ ಜನರಿಗೆ ಸಾಧ್ಯವಾಗುತ್ತಿತ್ತು. ವಿದ್ಯೆಯಿಂದ ವಂಚಿತರಾಗಿ, ಮೂಲ ಕಸುಬುಗಳಲ್ಲಿ ನೆಲೆ ನಿಲ್ಲಬೇಕಾದ ಸುಳ್ಯದ ಅನೇಕ ಯುವಕರು ವಿದ್ಯೆಯ ಜೊತೆಗೆ ಉದ್ಯೋಗವನ್ನು ಪಡೆಯುವ, ಉದ್ಯಮದಾರರಾಗುವ ಸಾಧ್ಯತೆಯಾದುದು ನಮ್ಮ ಕಾಲೇಜು ಆರಂಭವಾದ್ದರಿಂದ. ಇದರಿಂದಾಗಿ ಸುಳ್ಯದಲ್ಲಿ ಆರ್ಥಿಕ ಸಂಚಯನಕ್ಕೆ ಕಾರಣವಾಗಿ ಸುಳ್ಯ ಶ್ರೀಮಂತವಾಗಿದೆ. ವರ್ತಮಾನದಲ್ಲಿ ವೃತ್ತಿಪರ ಶಿಕ್ಷಣಕ್ಕೆ ಮಹತ್ವ ಬಂದಿದೆ. ವೃತ್ತಿ ಶಿಕ್ಷಣದ ಕೊರತೆಯನ್ನು ಕೂಡ ನಾವು ತಾಂತ್ರಿಕ ಮತ್ತು ವೈದ್ಯಕೀಯ ಶಿಕ್ಷಣ ಸಂಸ್ಥೆಗಳನ್ನು ಸ್ಥಾಪಿಸಿ, ಸ್ಥಳೀಯವಾಗಿ ಪರಿಸರದ ಯುವಜನತೆಗೆ ಅವು ಲಭಿಸುವಂತೆ ಮಾಡಿದ್ದೇವೆ. ದ.ಕ. ಮತ್ತು ಕೊಡಗು ಜಿಲ್ಲೆಗಳನ್ನು ಹೊಂದಿಕೊಂಡಂತೆ, ಶಿಕ್ಷಣವನ್ನು ಮುಖ್ಯವಾಗಿಟ್ಟುಕೊಂಡು ೧೧೨ ಕೊಠಡಿಗಳ ನಿರ್ಮಾಣಕ್ಕೆ ಧನಸಹಾಯ ಮಾಡಿದ್ದೇವೆ. ಅದರಲ್ಲಿ ಜ್ಞಾನ ದೇಗುಲಗಳಿರಬಹುದು. ಶಾಲಾ ಕೊಠಡಿಗಳಿರಬಹುದು. ಸುಳ್ಯ ಪರಿಸರದ ಒಟ್ಟು ಪ್ರಗತಿಯ ದೃಷ್ಟಿಯಿಂದ ೬೮ ಯುವಕ ಯುವತಿ ಮಂಡಲಗಳ ಸ್ಥಾಪನೆಗೆ ಸಹಕಾರ ನೀಡಿದ್ದೇವೆ. ಅದರಲ್ಲೂ ೧೬ ಸ್ವಂತ ಕಟ್ಟಡಗಳನ್ನು ಪಡೆಯುವಲ್ಲಿ ಧನಸಹಾಯ ಮಾಡಿದ್ದೇವೆ. ನಮ್ಮ ಮುಖ್ಯ ಉದ್ದೇಶ ಯುವ ಜನತೆಯಲ್ಲಿ ಪ್ರಗತಿಯ ದೃಷ್ಟಿ ಮೂಡಬೇಕೆನ್ನುವುದು. ದೇಶದ ಪ್ರಗತಿಯಲ್ಲಿ ಯುವಜನತೆಯ

ಪಾತ್ರ ಮಹತ್ತರವಾದುದು. ಈ ದೃಷ್ಟಿಯಿಂದ ಪರಿಸರದ ಸರ್ವತೋಮುಖ ಪ್ರಗತಿಯಲ್ಲಿ ತಮ್ಮ ಪಾತ್ರವಿದೆ ಎಂದು ಶ್ರೀ ಕುರುಂಜಿಯವರು ಆತ್ಮವಿಶ್ವಾಸ ದಿಂದ ಹೇಳುತ್ತಾರೆ.

ಇಂಜಿನಿಯರಿಂಗ್, ವೈದ್ಯಕೀಯ ಕಾಲೇಜುಗಳಂತಹ ಸಂಸ್ಥೆಗಳನ್ನು ಸ್ಥಾಪಿಸಿ ಪೋಷಿಸುವಲ್ಲಿ ಸಮಾಜದ ಸಹಕಾರವನ್ನು ಸ್ಮರಿಸುವ ಶ್ರೀ ಕುರುಂಜಿಯವರು, ಶಿಕ್ಷಣ ಸಂಸ್ಥೆಗಳನ್ನು ಆರಂಭಿಸಿದ ಸಂದರ್ಭದಲ್ಲಿ ಎದುರಾದ ತೊಡಕುಗಳನ್ನು ಹೇಳಿಕೊಳ್ಳುವುದಕ್ಕೂ ಮರೆಯುವುದಿಲ್ಲ. ಅದು ಅವರಲ್ಲಿ ಸಹಜವಾಗಿ ವ್ಯಕ್ತವಾಗುತ್ತದೆ. ಅನೇಕರಲ್ಲಿ ಬಹಳಷ್ಟು ಹಣ ಇರಬಹುದು. ಆದರೆ ಅದು ಸಮಾಜದ ಉಪಯೋಗಕ್ಕೆ ಬರಬೇಕು. ಇಲ್ಲದಿದ್ದರೆ ಅದು ವ್ಯರ್ಥ. ಅರ್ಥ ಪರಾರ್ಥಕ್ಕಾಗಿ ಇರಬೇಕು. ಸುಳ್ಯದಲ್ಲಿ ಶಿಕ್ಷಣ ಸಂಸ್ಥೆಗಳನ್ನು ಆರಂಭಿಸುವ ಸಾಹಸ ಆರಂಭವಾದದ್ದು ಒಂದು ಕುಟುಂಬದಿಂದ. ಮುಂದೆ ಏಕವ್ಯಕ್ತಿಯಿಂದ, ಆರ್ಥಿಕವಾಗಿ ಬೇರೆ ಯಾವ ಮೂಲವು ಇಲ್ಲ. ಇಂತಹ ಸಾಹಸಕ್ಕೆ "ವಿದ್ಯೆಯೆ ಎಲ್ಲದಕ್ಕೂ ಮೂಲ' ಎನ್ನುವ ಮೂಲ ಪ್ರೇರಣೆ. ಈ ಪ್ರೇರಣೆಗೆ ಪರಿಸರ ಕಾರಣವಾಯಿತು. ಅಜ್ಞಾನ, ಬಡತನದಿಂದ ಬಳಲುವ ಸಮಾಜಕ್ಕೆ ಅರಿವನ್ನು ನೀಡಬೇಕು. ಇದು ದೇಶದ ಪ್ರಗತಿಗೆ ಕಾರಣವಾಗುತ್ತದೆ. ಈ ನಿಟ್ಟಿನಲ್ಲಿ ಸಮಾಜದಿಂದ ನನಗೇನು ನಿರೀಕ್ಷೆಗಳಿಲ್ಲ. ನನ್ನಿಂದ ಸಮಾಜಕ್ಕೆ ಉಪಕಾರವಾಗಬೇಕು. ನಾವು ಸುಳ್ಯದಲ್ಲಿ ಹೈಸ್ಕೂಲು ಮಾಡಬೇಕಾದ ಸಂದರ್ಭದಲ್ಲಿ ಹಣ ಸಂಗ್ರಹ ಕ್ಕಾಗಿ ನಾಟಕ ಆಡಿಸಿದ್ದೇವೆ. ನಮ್ಮ ಮಾತೃ ಸಂಸ್ಥೆಯಾದ ನೆಹರು ಮೆಮೋರಿಯಲ್ ಕಾಲೇಜನ್ನು ಸ್ಥಾಪಿಸುವುದು ಆರ್ಥಿಕವಾಗಿ ಬಹಳ ಸಮಸ್ಯೆಯಾಗಿತ್ತು. ಇಂದು ಪೋಷಕರು ತಮ್ಮ ಮಕ್ಕಳನ್ನು ನಮ್ಮ ಕಾಲೇಜುಗಳಿಗೆ ಸೇರಿಸುವುದರ ಮೂಲಕ ಸಹಕರಿಸುತ್ತಾರೆ. ಈಗ ನಮ್ಮ ಪರಿಸರದ ಯುವಕರು, ಇಂಜಿನಿಯರ್, ಡಾಕ್ಟರರಾಗುವುದನ್ನು ನೋಡಿ ನಾನು ತೃಪ್ತಿ ಹೊಂದುತ್ತೇನೆನ್ನುವ ಸಹೃದಯತೆ ಶ್ರೀ ಕುರುಂಜಿಯವರದ್ದು. ಶಿಕ್ಷಣ ಸಂಸ್ಥೆಗಳನ್ನು ನಡೆಸುವುದು ಸುಲಭದ ಕಾರ್ಯವಲ್ಲ. ಅಲ್ಲಿ ಅನೇಕ ಅಡ್ಡಿ ಆತಂಕಗಳು ಇದ್ದೇ ಇವೆ. ವರ್ತಮಾನದಲ್ಲಿ ವಿದ್ಯಾಸಂಸ್ಥೆಗಳಲ್ಲಿ ಸಮಯ ಸಾಧಕತೆ ಮತ್ತು ರಾಜಕೀಯ ತುಂಬಿದೆ ಎನ್ನುವ ಪ್ರಜ್ಞಾವಂತರ ಆತಂಕಕ್ಕೂ ಸಹಮತ ಸೂಚಿಸುವ ಶ್ರೀ ಕುರುಂಜಿಯವರು ಸರಸ್ವತಿ ಮಂದಿರಗಳಲ್ಲಿ ಈ ಬಗೆಯ ರಾಡಿ ಸರಿಯಲ್ಲವೆಂದು ಸೂಚಿಸುತ್ತಾರೆ.

ನನ್ನ ದೃಷ್ಟಿಯಲ್ಲಿ ಅಧ್ಯಾಪಕರಷ್ಟೇ ಪೋಷಕರೂ ಮುಖ್ಯರಾಗುತ್ತಾರೆ. ತಮ್ಮ ಮಕ್ಕಳನ್ನು ಸರಿಯಾದ ದಾರಿಯಲ್ಲಿ ಹೋಗಲು ಮಾರ್ಗದರ್ಶನ ಮಾಡುವುದು ಅವರ ಕರ್ತವ್ಯ. ಇವತ್ತು ಇಂಗ್ಲಿಷ್ ಭಾಷಾ ಜಗತ್ತಿನಲ್ಲಿ ಪ್ರಮುಖ ವ್ಯಾವಹಾರಿಕ ಭಾಷೆಯಾಗಿರುವಾಗ ಅದರ ಕುರಿತಾದ ನಿರಾಕರಣೆ ಸಲ್ಲದು. ನಮ್ಮ ಮಾತೃ ಭಾಷೆ ಅನನ್ಯವಾದುದು. ಅದನ್ನು ಮರೆಯುವುದೆಂದರೆ ಹೆತ್ತ ತಾಯಿಯನ್ನು ಮರೆಯುವಂತೆ. ವೃತ್ತಿಪರ ಶಿಕ್ಷಣದಲ್ಲಿ ಇಂಗ್ಲಿಷ್ ಹೆಚ್ಚು ಉಪಕಾರವಾಗುತ್ತದೆ. ಈ ದೃಷ್ಟಿಯಿಂದ ಸುಳ್ಯ ತಾಲೂಕಿನ ೧೫೭ ಶಾಲೆಗಳಿಗೆ ಇಂಗ್ಲಿಷ್ ಲೈಬ್ರೆರಿಗಳನ್ನು ಕೊಟ್ಟಿದ್ದೇನೆ. ಜೊತೆಗೆ ಎಂಟು ಪದವಿಪೂರ್ವ ಕಾಲೇಜುಗಳಲ್ಲಿ, ವೃತ್ತಿಪರ ಶಿಕ್ಷಣಕ್ಕೆ ಪೂರಕವಾಗುವಂತೆ, ವಿಜ್ಞಾನ ತರಗತಿಗಳನ್ನು ತೆರೆಸಿದ್ದೇವೆ. ನಮ್ಮ ಸಹಕಾರವನ್ನು ನೀಡಿದ್ದೇವೆ. ಇದರ ಮುಖ್ಯ ಉದ್ದೇಶ ವೃತ್ತಿಪರ ಶಿಕ್ಷಣ ನಮ್ಮ ಗ್ರಾಮೀಣ ಯುವಕರಿಗೂ ಸಿಗುವಂತಾಗಬೇಕು. ನಗರದವರಿಗೆ ಮಾತ್ರ ಸಿಗುವ ಇಂತಹ ಶಿಕ್ಷಣ ನಮ್ಮವರಿಗೂ ಸಿಕ್ಕಿ, ಅವರೂ ಈ ಸ್ಪರ್ಧಾತ್ಮಕ ಜಗತ್ತಿನಲ್ಲಿ ತಮ್ಮ ಇರುವಿಕೆಯನ್ನು ತೋರಿಸಿ ಕೊಡಲಿ ಎನ್ನುವುದು ಶ್ರೀ ಕುರುಂಜಿಯವರ ಆಶಯ.

ಇಂದು ಶಿಕ್ಷಣದ ಪ್ರಕ್ರಿಯೆ ಸಾಗುತ್ತಿರುವ ದಿಕ್ಕನ್ನು ಗಮನಿಸಿದರೆ, ಅದು ಸರಕಾರದ ಖಾಸಗೀಕರಣ ನೀತಿಗೆ ಅನುಗುಣವಾಗಿರುವುದು ಸ್ಪಷ್ಟವಾಗುತ್ತಿದೆ. ಈ ಕುರಿತು ಶ್ರೀ ಕುರುಂಜಿಯವರ ನಿಲುವು, ಪ್ರಯೋಗ ಶೀಲ ಶಿಕ್ಷಣ ತಜ್ಞನ ನಿಲುವಾಗಿದೆ. ಸರಕಾರದ ಒಡೆತನದಿಂದ ಖಾಸಗಿಯವರಿಗೆ ವರ್ಗಾವಣೆಯಾಗುವುದು ಶಿಕ್ಷಣದ ಅಮೂಲಾಗ್ರ ಬದಲಾವಣೆಯ ದೃಷ್ಟಿಯಿಂದ ಮುಖ್ಯವೆನ್ನುತ್ತಾರೆ. ಸರಕಾರದ ಒಡೆತನದಲ್ಲಿ ಶಿಕ್ಷಣ ಏನಾಗುತ್ತಿದೆ ಎನ್ನುವ ಸ್ಪಷ್ಟ ಚಿತ್ರಣ ಅವರಿಗಿದೆ. ಖಾಸಗಿ ಸಂಸ್ಥೆಗಳಲ್ಲಿ ಅಚ್ಚುಕಟ್ಟುತನ, ಪೂರಕ ಅವಶ್ಯಕತೆಗಳು (Infrastructure) ಅಧ್ಯಾಪಕ, ಸಿಬ್ಬಂದಿ ಪೂರ್ಣ ಪ್ರಮಾಣದಲ್ಲಿದ್ದು ವಿದ್ಯಾರ್ಥಿಗಳಿಗೆ ಮತ್ತು ಒಟ್ಟು ಶಿಕ್ಷಣ ಪ್ರಕ್ರಿಯೆಗೆ ನ್ಯಾಯ ಸಂದಾಯ ವಾಗುತ್ತದೆ. ಖಾಸಗಿಯವರಲ್ಲೂ ಸ್ಪರ್ಧೆ ಏರ್ಪಟ್ಟು ಸ್ವಂತ ಗೌರವದ ಪ್ರಶ್ನೆಯಾಗಿ ಶಿಕ್ಷಣದ ಮೌಲ್ಯ (quality) ಸಹಜವಾಗಿ ಸುಧಾರಿಸುತ್ತದೆ. ಕೆಲವು ಖಾಸಗಿ ಶಿಕ್ಷಣ ಸಂಸ್ಥೆಗಳು ವ್ಯಾಪಾರಿ ಮನೋಧರ್ಮದಿಂದ ವ್ಯವಹರಿಸುತ್ತವೆ. ನಿಜ ಆದರೆ ಸರಕಾರ ತಾನು ಮಾಡುವ 'ಕಾನೂನು ನೀತಿ'ಯಲ್ಲಿ (Policy Matter) ಬಿಗುತನ ಮತ್ತು ಅನುಷ್ಠಾನಗೊಳಿಸುವಲ್ಲಿ ಪ್ರಾಮಾಣಿಕತೆ ತೋರಿಸಿದರೆ ಇದನ್ನು ನಿಯಂತ್ರಿಸಲು ಸಾಧ್ಯ ಎನ್ನುವ ಸಲಹೆಯನ್ನು ಶ್ರೀ ಕುರುಂಜಿಯವರು ನೀಡುತ್ತಾರೆ. ಖಾಸಗಿಯವರು ನಡೆಸುತ್ತಿರುವ ಅನೇಕ ಶಾಲಾ ಕಾಲೇಜುಗಳ ಉದಾಹರಣೆಯನ್ನು ನೀಡುತ್ತ ಅಲ್ಲಿನ ಫಲಿತಾಂಶಗಳನ್ನು ಸರಕಾರಿ ಶಾಲಾ ಕಾಲೇಜುಗಳ ಫಲಿತಾಂಶಗಳೊಂದಿಗೆ ತುಲನಾತ್ಮಕವಾಗಿ ತೂಗಿ ನೋಡಿ ತಮ್ಮ ಖಾಸಗೀಕರಣ ಕುರಿತಾದ ಒಲವನ್ನು ಸಮರ್ಥಿಸಿಕೊಳ್ಳುತ್ತಾರೆ. ಬಹಳ ಮುಖ್ಯವಾಗಿ ವೃತ್ತಿಪರ ಉನ್ನತ ಶಿಕ್ಷಣ ಖಂಡಿತ ಖಾಸಗೀಕರಣವಾಗಬೇಕು. ಮಾಧ್ಯಮಿಕ ಶಿಕ್ಷಣವನ್ನು ಕೂಡಾ ಖಾಸಗಿಯವರಿಗೆ ಕೊಟ್ಟರೆ ನಷ್ಟವಿಲ್ಲ. ಬೇಕಾದರೆ ಸರಕಾರವೂ ನಡೆಸಲಿ ಎನ್ನುವ ಶ್ರೀ ಕುರುಂಜಿಯವರು ಇಲ್ಲಿ ಪ್ರಯೋಗಶೀಲ ದೃಷ್ಟಿಯನ್ನು ಹೊಂದುತ್ತಾರೆ. ಈ ಬಗೆಯಿಂದಾಗಿಯೇ ಅವರ ಸಂಸ್ಥೆಗಳು ಹೆಚ್ಚು ಆಕರ್ಷಕವಾಗಿ ದೇಶದ ಗಮನ ಸೆಳೆಯಲು ಸಾಧ್ಯವಾಗಿದೆ. ಸಂಖ್ಯಾ ದೃಷ್ಟಿಗಿಂತ ಮೌಲ್ಯ ದೃಷ್ಟಿ ಮುಖ್ಯ ಎನ್ನುವುದು ಶ್ರೀ ಕುರುಂಜಿಯವರ ತತ್ವ.

ಶ್ರೀ ಕುರುಂಜಿಯವರು ಅರ್ಥಶಾಸ್ತ್ರದ ಅಧ್ಯಯನ ಮಾಡದೆ ಇರಬಹುದು. ಆದರೆ ಈ ಕುರಿತಾದ ಚಿಂತನೆ ಯಾವ ಅರ್ಥಶಾಸ್ತ್ರಜ್ಞನ ಚಿಂತನೆಗೂ ಕಡಿಮೆ ಮಟ್ಟದ್ದಲ್ಲ. ಅವರ ಪ್ರಯೋಗಶೀಲ ಅರ್ಥನೀತಿಯ ಬಗ್ಗೆ ವಿಚಾರಿಸಿದರೆ ಯಾವುದೇ ಗೊಂದಲಗಳಿಲ್ಲದೆ ವಿವರಿಸುತ್ತಾರೆ ಮತ್ತು ವಿಚಾರಿಸಿದವರಿಗೆ ತನ್ನ ಉಳಿತಾಯ ಯೋಜನೆಯ ಉಪಾಯಗಳನ್ನು ಹೇಳಿಕೊಡುತ್ತಾರೆ. ಮೂಲತಃ ನಾವು ಕೃಷಿಕರು. ಅಡಿಕೆ ಬೆಳೆ ಬೆಳೆಯುತ್ತೇವೆ. ಅದೇ ನಮ್ಮ ಬಂಡವಾಳದ ಮೂಲ. ಜೀವನೋ ಪಾಯದ ವೆಚ್ಚವನ್ನುಳಿದ ಸಂಪಾದನೆಯನ್ನು ಉಳಿತಾಯ ಯೋಜನೆಗಳಲ್ಲಿ ತೊಡಗಿಸುತ್ತೇವೆ. ಬಂದ ಲಾಭಾಂಶವನ್ನು ವಿವಿಧ ಉದ್ದೇಶಗಳಿಗೆ ಉಪಯೋಗಿಸುತ್ತೇವೆ. ಅದರಲ್ಲೂ ಮುಖ್ಯವಾಗಿ ಶಿಕ್ಷಣಕ್ಕೆ ಸಂಬಂಧಿಸಿದಂತೆ ಬಹುಪಾಲು ಹಣವನ್ನು ವ್ಯಯಿಸುತ್ತೇವೆ. ಹಣ ಉಳಿತಾಯ ಮಾಡಬೇಕಾದರೆ ಮನುಷ್ಯ ಮುಖ್ಯವಾಗಿ ದುಶ್ಚಟಗಳಿಂದ ಮುಕ್ತನಾಗಿರಬೇಕು. ನಮಗೆ ಯಾವ ಅಭ್ಯಾಸಗಳು ಇಲ್ಲದೆ ಇರುವುದರಿಂದ ದೊಡ್ಡ ಪ್ರಮಾಣದಲ್ಲಿ ಹಣವನ್ನು ಉಳಿತಾಯ ಯೋಜನೆಗಳಲ್ಲಿ ತೊಡಗಿಸಲು ಸಾಧ್ಯವಾಗಿದೆ. ಮೂಲಧನವನ್ನು ಹಾಗೆಯೇ ಉಳಿಸಿಕೊಂಡು, ಬರುವ ಲಾಭದ ಧನವನ್ನು ಸಮಾಜದ ಉದ್ಧಾರದ ದೃಷ್ಟಿಯಿಂದ ಅಷ್ಟಿಷ್ಟು ದಾನಧರ್ಮ ಮಾಡಿದ್ದೇವೆ. ಮುಂದೆಯು ಮಾಡುತ್ತೇವೆ. ಇಂದು ವಿಶ್ವಮಟ್ಟದಲ್ಲಿ ಆಗುತ್ತಿರುವ ಆರ್ಥಿಕ ಸಿದ್ಧಾಂತದಿಂದಾಗಿ, ಮುಕ್ತ ಮಾರುಕಟ್ಟೆ ವ್ಯಾಪಾರ ನೀತಿಯಿಂದಾಗಿ ಅಡಿಕೆಗೆ ಬೆಲೆ ಕುಸಿದಿದೆನ್ನಲಾಗುತ್ತದೆ. ಆದರೆ ಈಗ ಅಡಿಕೆಗೆ ಸರಕಾರ ನಿಗದಿಪಡಿಸಿದ ಬೆಂಬಲ ಬೆಲೆ ಯುಕ್ತವಾಗಿಯೆ ಇದೆ. ಒಮ್ಮೆ ಅಡಿಕೆಗೆ ಏರಿದ ಹುಚ್ಚು ಬೆಲೆ ನ್ಯಾಯಯುತ ವಾದುದಲ್ಲ. ನಾವೀಗ ಅಡಿಕೆ ಬೆಳೆಗಾರರು, ಬೆಲೆ ಕುಸಿದ ಸಂದರ್ಭಕ್ಕೆ ಹೊಂದಿಕೊಂಡು "ಮಿತವ್ಯಯ' ಮಾಡೋಣ. ಉಡುಗೆ ತೊಡುಗೆಗಳಲ್ಲಿ ದುಬಾರಿತನ ಬೇಡ, ಸರಳ ಜೀವನಕ್ಕೆ ಈಗಿನ ಬೆಲೆ ಸಾಕು. ಇದು ಶ್ರೀ ಕುರುಂಜಿಯವರ ಆರ್ಥಿಕ ನೀತಿಯ ಸರಳ ಸೂತ್ರಗಳು.

ವಿದ್ಯಾಸಂಸ್ಥೆಗಳು ಸರ್ವಸಮಾನತಾ ಭಾವದ ಆಧಾರದಲ್ಲಿ ವ್ಯಕ್ತಿಯ ಸರ್ವಾಂಗೀಣ ವಿಕಸನಕ್ಕೆ ಕಾರಣವಾಗಬೇಕು. ಇದು ಡಾ. ಎಸ್. ರಾಧಾಕೃಷ್ಣನ್‌ರವರ ಮಾತು. ಈ ಮಾತನ್ನು ಶ್ರೀ ಕುರುಂಜಿ ಯವರು ಮೆಚ್ಚುತ್ತಾರೆ. ಈ ಅರ್ಥದಲ್ಲಿ ಶಿಕ್ಷಕರ ದಿನಾಚರಣೆಯನ್ನು ಅರ್ಥಪೂರ್ಣವಾಗಿಸುವಲ್ಲಿ ಅವರು ವಿಶೇಷ ಮುತುವರ್ಜಿ ವಹಿಸುತ್ತಾರೆ. ಶಿಕ್ಷಣದ ಪ್ರಕ್ರಿಯೆಯಲ್ಲಿ ಶಿಕ್ಷಕ ಮುಖ್ಯ ಅಂಗ. ಶಿಕ್ಷಕರು ದೇಶದ ಶಿಲ್ಪಿಗಳು. ಅವರು ಗೌರವ ಯೋಗ್ಯರು ಎನ್ನುವ ಶ್ರೀ ಕುರುಂಜಿಯವರಿಗೆ ಶಿಕ್ಷಕರಲ್ಲಿ ಅಪಾರ ಗೌರವ ಮತ್ತು ಪ್ರೀತಿ. ತಮ್ಮ ಗುರುಗಳಾಗಿದ್ದ, ಪ್ರಮುಖ ಕವಿ ವಿದ್ವಾಂಸರಾಗಿದ್ದ ದಿ. ಕೋಳಂಬೆ ಪುಟ್ಟಣ್ಣ ಗೌಡರು ತಮ್ಮ ಮೇಲೆ ಬೀರಿದ ಪ್ರಭಾವವನ್ನು ಸ್ಮರಿಸುತ್ತಾರೆ. ಶಿಕ್ಷಕರ ಮೇಲಿರುವ ವಿಶೇಷ ಗೌರವಕ್ಕಾಗಿ ಒಂದೂವರೆ ಲಕ್ಷ ಹಣವನ್ನು ಉಳಿತಾಯ ಯೋಜನೆಯಲ್ಲಿ ತೊಡಗಿಸಿ, ಬರುವ ಬಡ್ಡಿ ಹಣದಿಂದ ಸುಳ್ಯ ತಾಲೂಕಿಗೆ ಸಂಬಂಧಿಸಿದಂತೆ, ವಿಶೇಷ ಸಾಧನೆ ಮಾಡಿದ ಶಿಕ್ಷಕರನ್ನು ಗುರುತಿಸಿ ಪ್ರತಿವರ್ಷ ಶಿಕ್ಷಕರ ದಿನದಂದು ಗೌರವಿಸುವ ಪರಂಪರೆಯನ್ನು ಶ್ರೀಯುತರು ಹುಟ್ಟುಹಾಕಿದ್ದಾರೆ.

ಸರ್ವ ಸಮಾನತೆಯ ದೃಷ್ಟಿಯಿಂದ ತಮ್ಮ ಎಲ್ಲಾ ಶಿಕ್ಷಣ ಸಂಸ್ಥೆಗಳಲ್ಲಿ ಸಮಾಜದ ಎಲ್ಲಾ ಜಾತಿ-ವರ್ಗಗಳ ವಿದ್ಯಾರ್ಥಿಗಳಿಗೆ ಮುಕ್ತವಾಗಿ ಮತ್ತು ಉದಾರವಾಗಿ ಅಧ್ಯಯನ ಮಾಡುವ ಅವಕಾಶವನ್ನು ಕಲ್ಪಿಸಿದ್ದೇವೆ. ನಮ್ಮಲ್ಲಿ ತಾರತಮ್ಯದ ಪ್ರಶ್ನೆಯೆ ಇಲ್ಲ. ಯಾಕೆಂದರೆ ನಾವು ಶಿಕ್ಷಣ ಸಂಸ್ಥೆಯನ್ನು ಕಟ್ಟಿದ ಉದ್ದೇಶವೇ ಸಮಾಜದ ಎಲ್ಲಾ ವರ್ಗಗಳು ಜ್ಞಾನವನ್ನು ಪಡೆಯಬೇಕೆನ್ನುವುದು. ಈ ಮಾತುಗಳನ್ನು ಆಡುವ ಶ್ರೀ ಕುರುಂಜಿಯವರು ಒಬ್ಬ ಮಾನವತಾವಾದಿಯಾಗಿ ಕಂಡುಬರುತ್ತಾರೆ.

ಪದವಿ ಕಾಲೇಜುಗಳನ್ನು, ತಾಂತ್ರಿಕ ಮತ್ತು ವೈದ್ಯಕೀಯ ಸಂಸ್ಥೆಗಳನ್ನು ಸ್ಥಾಪಿಸಿ ವ್ಯವಸ್ಥಿತವಾಗಿ ಆಡಳಿತ ನಡೆಸುತ್ತಿರುವ ಒಕ್ಕಲು ಮನೆತನದ ಶ್ರೀ ಕುರುಂಜಿಯವರನ್ನು ನೀವೊಂದು ಕೃಷಿ ವಿದ್ಯಾಲಯವನ್ನು ಸ್ಥಾಪಿಸಿದರೆ ಒಕ್ಕಲಿಗ ಸಮುದಾಯಗಳಿಗೆ ಅದರಿಂದ ಬಹುಮುಖಿ ಉಪಕಾರವಾಗಲಾರದೆ? ಎಂದು ಸಂವಾದಕ್ಕೆಳೆದರೆ, ಸಾಮಾನ್ಯವಾದ ಮತ್ತು ಅಷ್ಟೆ ಮಹತ್ವಪೂರ್ಣವಾದ ಅಭಿಪ್ರಾಯಗಳನ್ನು ವ್ಯಕ್ತಮಾಡುತ್ತಾರೆ. ಸರಕಾರವೇ ಕೃಷಿ ವಿದ್ಯಾಲಯಗಳನ್ನು ಅಚ್ಚುಕಟ್ಟಾಗಿ ನಡೆಸುತ್ತಿದೆ. ಖಾಸಗಿಯವರು ನಡೆಸಬಹುದಾದರೂ ಅದು ಸಣ್ಣ ಕಾರ್ಯವಲ್ಲ. ಅದಕ್ಕೆ ೬೦೦ ಎಕರೆ ಭೂಮಿಯ ಅವಶ್ಯಕತೆ ಇದೆ. ಪೂರಕ ಅವಶ್ಯಕತೆಗಳನ್ನು ಹೊಂದಿಸಿಕೊಳ್ಳುವುದು ಅಷ್ಟೇ ತ್ರಾಸದಾಯಕ. ಜೊತೆಗೆ ಇಂದು ಕೃಷಿ ಎನ್ನುವುದೇ ಲಾಭದಾಯಕವಲ್ಲವಾದ್ದರಿಂದ ಆ ಕುರಿತಾಗಿ ಸಮಾಜದಲ್ಲಿ ಬೇಡಿಕೆಯೂ ಇಲ್ಲ. "ಅವಶ್ಯಕತೆಗೆ ಅವಕಾಶ' ಎನ್ನುವ ನೀತಿಯನ್ನನುಸರಿಸಬೇಕು. "ವಿಶ್ವ ಮಾರುಕಟ್ಟೆ'ಯ ಗೊಂದಲ, ಜಾಗತೀಕರಣ ಈ ಎಲ್ಲಾ ವಾಸ್ತವಗಳ ಅರಿವಿರುವಾಗ ಇದು ಸ್ವಲ್ಪ ಆಲೋಚನೆ ಮಾಡಬೇಕಾದ ವಿಷಯವಾಗಿದೆ. ಆದರೂ ಬಯೋ ಟೆಕ್ನಾಲಜಿಗೆ ಒತ್ತು ಕೊಡುವ ಕಾಲ ಬಂದಿರುವಾಗ ಈ ಬಗ್ಗೆ ಚಿಂತಿಸಬೇಕಾದ ಅಗತ್ಯವಿದೆ. ಎಲ್ಲವೂ ಕಾಲದಿಂದ ನಿರ್ಧಾರವಾಗುತ್ತದೆನ್ನುವ ಆಶಾವಾದ ಈ ಕುರಿತಾಗಿ ಶ್ರೀ ಕುರುಂಜಿಯವರಲ್ಲಿ ಕಾಣುತ್ತದೆ.

ಸಾಮಾಜಿಕವಾಗಿ ಶ್ರೀ ಕುರುಂಜಿಯವರ ಕೊಡುಗೆಗಳು ಅನನ್ಯವಾದವುಗಳು. ಶಿಕ್ಷಣದಷ್ಟೆ, ದೇಹ ಮನಸ್ಸುಗಳ ಸ್ವಾಸ್ಥ್ಯ ಮುಖ್ಯವೆಂದು ಪರಿಗಣಿಸುವ ಅವರು ಸಮಾಜದ ಒಟ್ಟು ಹಿತ ದೃಷ್ಟಿಯಿಂದ ಶ್ರಮಿಸುತ್ತಿದ್ದಾರೆ. ಅರಿವು ಅನೇಕ ಸಾಮಾಜಿಕ ಪಿಡುಗುಗಳನ್ನು ನಿವಾರಿಸಿಕೊಳ್ಳಲು ಸಾಧನವೆನ್ನುವ ಕಾರಣಕ್ಕಾಗಿ ಶಿಕ್ಷಣ ಸಂಸ್ಥೆಗಳನ್ನು ಕಟ್ಟಿದ್ದೇವೆ. ದುರದೃಷ್ಟವಶಾತ್ ನಿರಂತರವಾಗಿ ಸಮಾಜ ಮುಖದಲ್ಲಿ ಮತಾಂಧತೆ, ತಾರತಮ್ಯ ಭಾವ, ವರದಕ್ಷಿಣೆ, ಜಾತಿ ವೈಷಮ್ಯ, ಬಡತನ, ಮೂಢನಂಬಿಕೆ ಇವೇ ಮೊದಲಾದ ಪಿಡುಗುಗಳು ಕಂಡು ಬರುತ್ತಿವೆ. ಇದಕ್ಕೆಲ್ಲ ನಮ್ಮಿಂದ ಪರಿಹಾರ ಸಾಧ್ಯವಿಲ್ಲವೇ? ಖಂಡಿತವಿದೆ. ಮುಖ್ಯವಾಗಿ ನಾವು ವಿಶಾಲದೃಷ್ಟಿಯನ್ನು ಬೆಳೆಸಿಕೊಳ್ಳಬೇಕು. ನಾವೆಲ್ಲ ಮನುಷ್ಯರೆನ್ನುವ ಮೂಲಭೂತ ಅರಿವು ಬರಬೇಕು. ಬುದ್ಧ, ಏಸು, ಪೈಗಂಬರ್ ಬದುಕಿ ತೋರಿಸಿದ ಶಾಂತಿ, ಸೌಹಾರ್ದತೆ ಸಹಬಾಳ್ವೆ ಮುಂತಾದ ಮಾನವೀಯ ಅಂತಃಕರಣದ ನೆಲೆಗಳು ಸಾಮಾಜಿಕ ಸ್ವಾಸ್ಥ್ಯ ವನ್ನು ಕಾಪಾಡಬಲ್ಲುವು. ಆಧುನಿಕ ವೈಜ್ಞಾನಿಕ ಮನೋಧರ್ಮವನ್ನು ಅರ್ಥೈಸಿ ಬೆಳೆಸಿಕೊಳ್ಳಬೇಕು. ಹಳೆಯದನ್ನು ತಿರಸ್ಕರಿಸಿದೆ ಹೊಸದೆನ್ನುವ ಕಾರಣಕ್ಕಾಗಿ ಎಲ್ಲವನ್ನೂ ಪುರಸ್ಕರಿಸದೆ ಇವೆರಡರ ಸಮನ್ವಯ ಮುಖ್ಯವಾಗಬೇಕು ಎನ್ನುವ ಶ್ರೀ ಕುರುಂಜಿಯವರು ಪರಂಪರೆ ಮತ್ತು ಆಧುನಿಕತೆಯ ಸಮನ್ವಯಕಾರರಾಗಿ ಕಂಡುಬರುತ್ತಾರೆ.

ವರ್ತಮಾನದಲ್ಲಿ ಸರಕಾರದ ಬೊಕ್ಕಸಕ್ಕೆ ಬರುವ ಆದಾಯದಲ್ಲಿ ಬಹುಪಾಲು ಅಬಕಾರಿಯಿಂದ ಬರುತ್ತಿದೆ. ಅಬಕಾರಿ ಮುಕ್ತ ರಾಷ್ಟ್ರದ ಕಲ್ಪನೆ ಗಾಂಧಿ ಕನವರಿಸಿದ್ದು, ಒಂದು ವೇಳೆ ಸರಕಾರ ಗಾಂಧೀಜಿಯ ಕನಸನ್ನು ನನಸಾಗಿಸುವ ಪ್ರಯತ್ನದಲ್ಲಿ ತೊಡಗಿದರೆ, ನಾನು ಬಹಳ ಮುತುವರ್ಜಿಯಿಂದ ಅದರ ಪರವಾಗಿ ಕೈಜೋಡಿಸುತ್ತೇನೆ. ಯಾಕೆಂದರೆ ಮದ್ಯಪಾನ ನಮ್ಮ ಸಮಾಜದಲ್ಲಿರುವ ಬಹುದೊಡ್ಡ ಪಿಡುಗು. ಮದ್ಯಪಾನ ಮಾನಸಿಕ ಅಸಮತೋಲನಕ್ಕೆ ಕಾರಣವಾಗಿ ವಿನಾಶಕಾರಿ ಸಮಾಜ ಬಾಹಿರ ಚಟುವಟಿಕೆಗಳು ಆರಂಭವಾಗುತ್ತವೆ. ಯುವ ಜನಾಂಗ ಈ ಪಿಡುಗಿಗೆ ಬಲಿಯಾಗುತ್ತಿರುವುದು ವಿಷಾದಕರ ನೋಡಿ. ನಾನು ಒಂದು ವೇಳೆ ಈ ಪಿಡುಗಿನಿಂದ ದೂರ ಉಳಿಯದೆ ಇರುತ್ತಿದ್ದರೆ, ಇಷ್ಟೆಲ್ಲ ಸಂಸ್ಥೆಗಳನ್ನು ಕಟ್ಟಲು ಸಾಧ್ಯವಾಗುತ್ತಿತ್ತೇ? ಇಲ್ಲ. ಇದನ್ನೆಲ್ಲ ಮನಗಂಡು ನಾನು ಭಾಗವಹಿಸುವ ಸಮಾರಂಭದಲ್ಲಿ ಸಂದರ್ಭೋಚಿತವಾಗಿ ತಿಳಿಯಪಡಿಸುತ್ತೇನೆ. ಈ ಅರ್ಥದಲ್ಲಿ ಸರಕಾರದ ಯಾವ ನೀತಿಗೂ ಕಾಯದೆ ಅಧಿಕೃತವಾಗಿ ಮದ್ಯಪಾನಕ್ಕೆ ವಿರೋಧವನ್ನು ವ್ಯಕ್ತಪಡಿಸಿದ್ದೇನೆ. ನಾವು ಮಾತನ್ನು ಕೃತಿಗಳಿಸಿ ತೋರಿಸಿದ್ದೇವೆ. ನಮ್ಮ ಕುಟುಂಬದಲ್ಲಿ ಯಾರಿಗೂ ಈ ದುಶ್ಚಟವಿಲ್ಲ. ಹಾಗಾಗಿ ಎಲ್ಲರೂ ಸ್ಥಿತಿವಂತರಾಗಿದ್ದಾರೆ. ಸಮಾಜದಲ್ಲಿ ಒಂದಲ್ಲ ಒಂದು ಬಗೆಯ ಗೌರವಕ್ಕೆ ಪಾತ್ರರಾಗಿದ್ದಾರೆ. ಸರಕಾರಕ್ಕೆ ಅಬಕಾರಿಯಿಂದ ಎಷ್ಟೇ ಆದಾಯ ಬರಲಿ ಅದು ಮುಖ್ಯವಲ್ಲ. ಖಂಡಿತ ಸರಕಾರ ನೀತಿಯನ್ನು ಜಾರಿಗೆ ತಂದರೆ, ಸುಳ್ಯವನ್ನು ಮದ್ಯ ಮುಕ್ತ ತಾಲೂಕ ನ್ನಾಗಿಸುವ ಕಾರ್ಯದಲ್ಲಿ ನಮ್ಮಿಂದಾಗುವ ಯಾವ ಬಗೆಯ ಸಹಾಯವನ್ನು ಮಾಡಲು ಸಿದ್ಧ ಎನ್ನುವ ದೃಢನಿರ್ಧಾರವನ್ನು ಶ್ರೀ ಕುರುಂಜಿಯವರು ವ್ಯಕ್ತಪಡಿಸುತ್ತಾರೆ.

ಸುಳ್ಯ ಪರಿಸರದ ಗೌಡ ಜನಾಂಗ ಆರ್ಥಿಕವಾಗಿ ಮುಂದುವರಿದಿರುವುದಕ್ಕೆ ಭೌಗೋಳಿಕತೆ ಒಂದು ಕಾರಣವಾದರೆ ಶೈಕ್ಷಣಿಕವಾಗಿಯೂ ಮುಂದುವರಿದಿರುವುದಕ್ಕೆ ಶ್ರೀ ಕುರುಂಜಿಯವರ ಕೊಡುಗೆ ಇನ್ನೊಂದು ಕಾರಣ. ಸುಳ್ಯ ಪರಿಸರದ ಈ ಬಗೆಯ ಪ್ರಗತಿಯನ್ನು ದ.ಕ ಜಿಲ್ಲೆಯ ಇತರ ಪರಿಸರದ ಗೌಡ ಜನಾಂಗದಲ್ಲಿ ಕಾಣಲು ಸಾಧ್ಯವಿಲ್ಲ. ಸುಳ್ಯದ ಅಭಿವೃದ್ಧಿಯಲ್ಲಿ ಶ್ರೀ ಕುರುಂಜಿಯವರ ಪಾತ್ರ ಮಹತ್ತರವಾದುದು ಎನ್ನುವ ವಿಚಾರವನ್ನು ಈ ಪರಿಸರದ ಜನ ಮುಕ್ತವಾಗಿ ಮತ್ತು ಪ್ರಾಮಾಣಿಕ ವಾಗಿ ಒಪ್ಪಿಕೊಳ್ಳುತ್ತಾರೆ. ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯ ಎಲ್ಲಾ ಗೌಡರು ಆರ್ಥಿಕವಾಗಿ, ಶೈಕ್ಷಣಿಕವಾಗಿ, ಸಾಮಾಜಿಕವಾಗಿ ಮುಂದುವರಿಯುವುದರ ಕುರಿತಾಗಿಯೂ ಶ್ರೀ ಕುರುಂಜಿಯವರು ಗಮನಿಸುತ್ತಾರೆ. ಮುಖ್ಯವಾಗಿ ಶಿಕ್ಷಣ ಸಂಸ್ಥೆಗಳನ್ನು ಸ್ಥಾಪಿಸುವ ಹಿನ್ನೆಲೆಯಲ್ಲಿ ಬೇಡಿಕೆ, ಕೋರಿಕೆಗಳು ಬಂದಾಗಲೆಲ್ಲಾ ಸಲಹೆಗಳನ್ನು ಹಾಗೆಯೇ ಆರ್ಥಿಕವಾದ ಸಹಕಾರವನ್ನು ಕೊಟ್ಟಿದ್ದೇವೆ. ಸಮುದಾಯ, ವರ್ಗಗಳ ನಿರ್ಮಾಣ, ಶಾಲಾ ಕೊಠಡಿಗಳ ರಚನೆ, ರಂಗ ಮಂದಿರಗಳ ಸ್ಥಾಪನೆಗೆ ದ.ಕ ಜಿಲ್ಲೆಯ ಎಲ್ಲಾ ಭಾಗಗಳಿಗೂ ನೀಡಿದ್ದೇನೆ. ನಮ್ಮ ಜನಾಂಗ ಮಾತ್ರವಲ್ಲ; ಇಡೀ ಸಮುದಾಯವೇ ಮುಂದುವರಿಯುವುದು ಬಹಳ ಮುಖ್ಯವೆನ್ನುವುದು ನನ್ನ ಭಾವನೆ ಎಂದು ಶ್ರೀ ಕುರುಂಜಿಯವರು ಬಹುಜನ ಹಿತವನ್ನು ಬಯಸುತ್ತಾರೆ.

ಶ್ರೀ ಕುರುಂಜಿಯವರು ಸಾಹಿತ್ಯ ಪ್ರೇಮಿ ಕಲಾ ಪೋಷಕರು. ಈ ಪ್ರೀತಿಗೆ ಕಾರಣವಾದ ಸಾಂಸ್ಕೃತಿಕ ಹಿನ್ನಲೆಯನ್ನು ತನ್ನ ಯುತೆಯಿಂದ

ವಿವರಿಸುತ್ತಾರೆ. "ಲೋಕೋ ಭಿನ್ನರುಚಿಃ' ಎಂಬಂತೆ ಒಬ್ಬೊಬ್ಬರಿಗೆ ಒಂದೊಂದು ಅಭಿರುಚಿ. ನನಗೆ ಕಲೆಗಳಲ್ಲಿ ಅಭಿರುಚಿ. ಯಾಕೆಂದರೆ ದುಡಿದು ಬಂದು ಆಯಾಸಗೊಂಡ ಮೈಮನಗಳಿಗೆ ಆನಂದವೂ ಮುಖ್ಯ ಇದನ್ನು ಕಲಾಪ್ರಕಾರಗಳು ನೀಡುತ್ತವೆ. ನಮ್ಮ ತಂದೆಯವರಾದ ದಿವಂಗತ ಮಾಲಿಂಗ ಗೌಡರು ವೃತ್ತಿಯಲ್ಲಿ ಶಾಲಾ ಮಾಸ್ತರರಾಗಿದ್ದರು. ಅವರು ಪಾಠ ಪ್ರವಚನಗಳನ್ನು ಮಾಡುವುದರ ಜೊತೆಗೆ ಪ್ರವೃತ್ತಿಯಲ್ಲಿ ಯಕ್ಷಗಾನ ಕಲಾವಿದರು ಕೂಡ ಆಗಿದ್ದರು. ಅವರು ಭಾಗವತಿಕೆಯಲ್ಲಿ ಬಹುಜನ ಪ್ರಿಯರಾಗಿದ್ದರು. ಅವರು ಪ್ರಾತಃ ಕಾಲದಲ್ಲಿ ಹಾಡುತ್ತಿದ್ದ "ಮೋಹನ ರಾಗ' ಇವತ್ತು ಕೂಡ ನನ್ನ ಕಿವಿಯಲ್ಲಿ ಗುಂಯ್ಗುಟ್ಟುತ್ತಿದೆ. ಅವರು ಭಾಗವತಿಕೆಯ ಜೊತೆಗೆ ಮೃದಂಗ, ಘಂಟಾಶೀಲ, ಮದನಶೀಲಗಳನ್ನು ನುಡಿಸುತ್ತಿದ್ದರು. ಒಂದಷ್ಟು ಹುಡುಗರನ್ನು ಸೇರಿಸಿಕೊಂಡು, "ಯಕ್ಷಗಾನ ತಾಳ ಮದ್ದಳೆ' ಕೂಟವನ್ನು ನುಡಿಸುತ್ತಿದ್ದರು. ಆಗ ನಾನು ಅರ್ಥ ಮಾತಾಡುತ್ತಿದ್ದೆ. ಈ ಹಿನ್ನೆಲೆ ಇವತ್ತೂ ಸಹ ರಾತ್ರಿ ಹೊತ್ತು ಕೂತು ಯಕ್ಷಗಾನ ಪ್ರದರ್ಶನಗಳನ್ನು ನೋಡುವಂತೆ ಮಾಡುತ್ತಿದೆ.

ಸಾಹಿತ್ಯವೂ ಅಷ್ಟೇ. ಓದುವ ಹವ್ಯಾಸ. ಈಗೀಗ ಕಡಿಮೆ. ಸಮಯವಿಲ್ಲ. ಆದರೆ ಸಾಹಿತ್ಯ ಸಮಾರಂಭಗಳಲ್ಲಿ ವಿದ್ವಾಂಸರ ಮಾತುಗಳನ್ನು ಆಲಿಸುವುದು ಬಹಳ ಇಷ್ಟದ ವಿಚಾರ. ಬಲ್ಲವರು ಹೇಳುವಂತೆ "ಹತ್ತು ಪುಸ್ತಕ ಓದುವುದಕ್ಕಿಂತ ಒಂದು ಒಳ್ಳೆಯ ಭಾಷಣ ಕೇಳುವುದು ಒಳ್ಳೆಯದು ಅಂತ ಹಾಗೆ. ನೋಡಿ ನಾವು ದ.ಕ ಜಿಲ್ಲಾ ೭ನೇ ಕನ್ನಡ ಸಾಹಿತ್ಯ ಸಮ್ಮೇಳನವನ್ನು ೧೯೯೯ರಲ್ಲಿ ನಮ್ಮಲ್ಲಿ ನಡೆಸಲು ಈ ಹಿನ್ನೆಲೆಯು ಒಂದು ಕಾರಣವಾಗಿತ್ತು. ನಮ್ಮ ಕ್ಯಾಂಪಸ್‌ನಲ್ಲಿ ಸಾಹಿತ್ಯ ಚರ್ಚೆ ನಡೆಸುವುದು ನಮಗೆ ಹೆಮ್ಮೆ ಮತ್ತು ಸಂತೋಷದ ವಿಷಯವಾಗಿತ್ತು. ನಮ್ಮ ಸಂಸ್ಥೆಗಳಲ್ಲೂ ಅನೇಕ ಜನ ಬರಹಗಾರರಿದ್ದಾರೆ. ಯಾವುದೇ ಸಾಹಿತ್ಯ ಕೃತಿಗಳ ಬಿಡುಗಡೆ ಸಂದರ್ಭದಲ್ಲೂ ಪ್ರೋತ್ಸಾಹ ರೂಪದಲ್ಲಿ ಹಣಕೊಟ್ಟು ಒಂದಷ್ಟು ಪುಸ್ತಕಗಳನ್ನು ಪಡೆದುಕೊಳ್ಳುವ ಪರಿಪಾಠ ನನ್ನದು. ಸಾಹಿತ್ಯವೆನ್ನುವುದು ಬದುಕನ್ನು ಕುರಿತದ್ದಾಗಿರುವುದರಿಂದ ಅದು ಬಹಳ ಮುಖ್ಯ. ಅದಕ್ಕೆ ಪ್ರೋತ್ಸಾಹ ಕೊಡುವುದು ನಮ್ಮೆಲ್ಲರ ಕರ್ತವ್ಯವೆಂದು ಶ್ರೀ ಕುರುಂಜಿಯವರು ಸಾಹಿತ್ಯದ ಕುರಿತಾದ ಪ್ರೀತಿಯ ಬಗ್ಗೆ ಅಭಿಪ್ರಾಯಪಡುತ್ತಾರೆ. ಸಾಹಿತ್ಯದ ಕುರಿತಾದ ಸಭೆ - ಗೋಷ್ಠಿಗಳಿಗೆ ಪ್ರೋತ್ಸಾಹ ರೂಪವಾಗಿ ಧನಸಹಾಯವನ್ನು ಮಾಡುತ್ತಾರೆ.

ಇಂದು ಶಿಕ್ಷಣ ಸಂಸ್ಥೆಗಳ ಸಮಾರಂಭ, ವರ್ಧಂತಿಗಳಲ್ಲಿ "ಫ್ಯಾಶನ್ ಶೋ', ಸಾಹಿತ್ಯದ ಗಂಧಗಾಳಿಯಿಲ್ಲದ ಸಿನಿಮಾ ಹಾಡುಗಳಿಗೆ ನರ್ತಿಸುವ ಸಂಪ್ರದಾಯ ರೂಪುಗೊಳ್ಳುತ್ತಿದೆ. ಇದನ್ನು ಯುವಕರು ಸಂಸ್ಕೃತಿಯೆಂದು ಭಾವಿಸುವ ಅಪಾಯವಿದೆ. ಇದು ಸಲ್ಲ. ಸದಾಭಿರುಚಿಯನ್ನುಂಟು ಮಾಡುವ ಮಾನವೀಯ ಅಂಶಗಳಾದ, ಪ್ರೀತಿ, ದಯೆ, ಶಾಂತಿ, ಸಹಬಾಳ್ವೆಗಳನ್ನು ರೂಪಿಸಿಕೊಳ್ಳಲು ಪ್ರೇರಣೆಯಾಗಬಲ್ಲ ಕಲಾಪ್ರಕಾರಗಳು ಪ್ರದರ್ಶನಗೊಳ್ಳಬೇಕು. ಇವತ್ತು ಯಕ್ಷಗಾನದಂತ ಕಲೆಗಳು ಗೌಣ ವಾಗುತ್ತಿವೆ. ಇಡೀ ರಾತ್ರಿ ಬಯಲಾಟ ನೋಡುವಷ್ಟು ಇಂದು ಸಮಯ ಯಾರಿಗೂ ಇಲ್ಲ. ನಿಜ ಹಾಗೆಂದು ಅದನ್ನು ಮರೆಯುವುದು ಸರಿಯಲ್ಲ. ಬದಲಾದ ಕಾಲಗತಿಗೆ ಕಲೆಯ ಗತಿಯನ್ನು ಹೊಂದಿಸಿಕೊಳ್ಳಬೇಕು. ಯಕ್ಷಗಾನದಲ್ಲಿ ಬರುವ ಸಮರ್ಥ ಪಾತ್ರ - ಅರ್ಥಧಾರಿಗಳ ಸಾಂದರ್ಭಿಕ ಸಂವಾದಗಳು ಎಂತಹ ತಾರ್ಕಿಕ ಶಕ್ತಿಯನ್ನು ನೀಡಬಲ್ಲುವು. ಇಂತಹ ಕಲಾಪ್ರಕಾರಗಳನ್ನು ನಾವು ಪೋಷಿಸಿಕೊಳ್ಳಬೇಕು. ಈ ಮೂಲಕ ನಮ್ಮ ಸಾಂಸ್ಕೃತಿಕ ನೆಲೆಗಳನ್ನು ಕಾಯ್ದುಕೊಳ್ಳಬೇಕು. ಭೋಗ ಸಂಸ್ಕೃತಿಯ ಸರಕುಗಳನ್ನು ನಿರಾಕರಿಸಬೇಕು ಎನ್ನುವ ಶ್ರೀ ಕುರುಂಜಿಯವರು ಸಂಸ್ಕೃತಿ ಚಿಂತಕರಾಗಿ ಕಂಡುಬರುತ್ತಾರೆ.

ನನ್ನ ವ್ಯಕ್ತಿತ್ವದ ಮೇಲೆ ಪ್ರಭಾವ ಬೀರಿದ ವ್ಯಕ್ತಿಗಳೆಂದರೆ ಮಹಾತ್ಮ ಗಾಂಧಿ, ಜವಾಹರಲಾಲ ನೆಹರು, ಮಣಿಪಾಲದ ಟಿ.ಎಂ.ಎ. ಪೈ. ನಾನು ಅಳವಡಿಸಿಕೊಂಡಿರುವ ಸತ್ಯ, ಪ್ರೇಮ, ಧರ್ಮನಡತೆ, ಮಾತು, ಶಾಂತಿ, ತಾಳ್ಮೆ, ಧೈರ್ಯ ಈ ಅಷ್ಟಗುಣಗಳು ಮತ್ತು ಪರಿಶ್ರಮ ಏಕಾಗ್ರತೆ ಪ್ರಾಮಾಣಿಕತೆ ಸಮಯ ಪ್ರಜ್ಞೆ ಮತ್ತು ತ್ಯಾಗ -ಸೇವೆ. ಈ ಪಂಚಸೂತ್ರಗಳು ಗಾಂಧಿ ಪ್ರೇರಿತವಾದವುಗಳು. ಆಧುನಿಕ ಭಾರತ ಕಟ್ಟುವ ನೆಹರು ಚಿಂತನೆ ಆಧುನಿಕ ಸುಳ್ಯ ಕಟ್ಟುವ ನನ್ನ ಕಲ್ಪನೆಗೆ ಮಾದರಿ. ಈ ಅರ್ಥದಲ್ಲಿ ನಮ್ಮ ಮಾತೃಸಂಸ್ಥೆಗೆ ಅದರ ಸ್ಮರಣಾರ್ಥವಾಗಿ ನೆಹರು ಮೆಮೋರಿಯಲ್ ಕಾಲೇಜು ಎಂದು ನಾಮಧೇಯ ಮಾಡಿದ್ದೇವೆ. ಶಿಕ್ಷಣ ಸಂಸ್ಥೆಗಳನ್ನು ಕಟ್ಟುವಲ್ಲಿ, ಸುಳ್ಯವನ್ನು ಮಿನಿ ಭಾರತ ಮಾಡುವಲ್ಲಿ ಮಣಿಪಾಲದ ಶಿಲ್ಪಿ ಟಿ.ಎಂ.ಎ. ಪೈ ಪ್ರೇರಣೆಯಾಗಿದ್ದಾರೆ ಎನ್ನುವಲ್ಲಿ ತನಗಾದ ಪ್ರೇರಣೆಯ ಮೂಲಗಳನ್ನು ಸಕಾರಾತ್ಮಕವಾಗಿ ಉಲ್ಲೇಖಿಸುತ್ತಾರೆ.

ನನ್ನ ಜೀವನದಲ್ಲಿ ನೋವಿನ ಪ್ರಸಂಗಗಳಿಲ್ಲ. ಯೋಜನಾಬದ್ಧವಾಗಿ ಕಾರ್ಯಗಳನ್ನು ಮಾಡ ಬೇಕು. ಕಷ್ಟಗಳು ಎದುರಾಗುತ್ತವೆ. ಅವು ಸೋಲುಗಳಲ್ಲ. ಧೈರ್ಯದಿಂದ ಮುಂದುವರಿಸುತ್ತೇವೆ. ಯಶಸ್ಸಾಗಿದೆ. ಮನುಷ್ಯನಲ್ಲಿ ದುಶ್ಚಟಗಳಿರಬಾರದು. ಮನೆಯ ನೆಮ್ಮದಿ ಸಮಾಜ ಮುಖದಲ್ಲಿ ಕ್ರಿಯಾತತ್ಪರತೆಯನ್ನು ತಂದು ಕೊಡುವ ಮೂಲ. ಪ್ರತಿಯೊಬ್ಬರ ದಾಂಪತ್ಯ ಜೀವನವೂ ಒಂದಾಗಿರಬೇಕು. ಒಂದಾಗಿರದಿರಬಾರದು ಎನ್ನುವ ತತ್ವದಲ್ಲಿ ತಮ್ಮ ಶ್ರೀಮತಿಯರಾದ ಜಾನಕಿ ವೆಂಕಟ್ರಮಣ ಗೌಡರ ಸಹಕಾರ, ಸ್ಫೂರ್ತಿಯ ನೆಲೆಯನ್ನು ಗುರುತಿಸಿ ಕೊಂಡಿದ್ದಾರೆ.

ಅಕಾಡೆಮಿ ಆಫ್ ಲಿಬರಲ್ ಎಜ್ಯುಕೇಶನ್ (ರಿ) ಸುಳ್ಯಕ್ಕೆ ಮೆಡಿಕಲ್ ಕಾಲೇಜನ್ನು ಹೊಂದಿಸಿ ಕೊಳ್ಳುವುದು ನನ್ನ ಜೀವನದ ದೊಡ್ಡಗುರಿ ಎಂದುಕೊಂಡಿದ್ದ ಶ್ರೀ ಕುರುಂಜಿಯವರ "ಮರಳಿ ಯತ್ನವ ಮಾಡು' ಎಂಬ ಹದಿನೇಳು ವರ್ಷಗಳ ದೀರ್ಘ ಹೋರಾಟದ ಫಲಕ್ಕೆ ಈ ವರ್ಷ ಅದು ಮಣಿಯಲೇಬೇಕಾಯಿತು. ಈಗ ನನಗೆ ಸಮಾಧಾನವಾಗಿದೆ ಎನ್ನುವ ಶ್ರೀ ಕುರುಂಜಿಯವರನ್ನು ಮುಂದಿನ ಗುರಿಯೇನೆಂದು ಪ್ರಶ್ನಿಸಿದರೆ ಸಾಧನೆಗೆ ಅಂತ್ಯವಿಲ್ಲ. ಕಾಲವೇ ಅದನ್ನು ನಿರ್ಧರಿಸುತ್ತದೆ ಎನ್ನುವ ಕ್ರಿಯಾ ತತ್ಪರತೆಯ ದಾರ್ಶನಿಕ ನಿಲುವನ್ನು ವ್ಯಕ್ತ ಮಾಡುತ್ತಾರೆ. ನನಗೆ ವೈದ್ಯಕೀಯದ ಕುರಿತಾಗಿ ಮೊದಲಿಂದಲೂ ಒಲವು. ಆ ಕಾರಣಕ್ಕಾಗಿಯೇ ನನ್ನ ಇಬ್ಬರು ಗಂಡು ಮಕ್ಕಳನ್ನು ವೈದ್ಯಕೀಯ ಪದವೀಧರರಾಗುವಂತೆ ಪ್ರೇರೇಪಿಸಿದೆ ಹಾಗೆಯೆ ಡಾಕ್ಟರ್ ಅಳಿಯನನ್ನು ಇಷ್ಟಪಟ್ಟೆ. ಈಗ ಮೆಡಿಕಲ್ ಕಾಲೇಜನ್ನು ಸ್ಥಾಪಿಸಿದೆ. ಇದರ ಸ್ಥಾಪನೆಯಲ್ಲಿ ಎಲ್ಲರದ್ದು ಮಹತ್ತರ ಪಾತ್ರವಿದೆ. ಈಗ ನನಗೆ ಸಂತೃಪ್ತಿಯಿದೆಯೆಂದು ಶ್ರೀ ಕುರುಂಜಿಯವರು ತೃಪ್ತಿಯ ನಿಟ್ಟುಸಿರು ಬಿಡುತ್ತಾರೆ.

ಭಕ್ತಿ ಭಂಡಾರಿ ಬಸವಣ್ಣನವರ "ಕಾಯಕವೇ ಕೈಲಾಸ'ವೆನ್ನುವ ತತ್ವಕ್ಕೆ ಅಂಟಿಕೊಂಡು ದುಡಿಯುವ, ದುಡಿಮೆಯಲ್ಲಿ ದೇವರನ್ನು ಕಾಣುವ ಶ್ರೀ ಕುರುಂಜಿಯವರು ಈಗ ಸುಳ್ಯದ ಅಶಕ್ತ ಜನರ ಕೊರತೆಯನ್ನು ನೀಗುವ ನಿಟ್ಟಿನಲ್ಲಿ ಸುಳ್ಯ ಚೆನ್ನಕೇಶವ ದೇವಸ್ಥಾನದ ಜೀರ್ಣೋದ್ಧಾರ ಕಾರ್ಯದಲ್ಲಿ ತೊಡಗಿದ್ದಾರೆ. ಸುಮಾರು ಒಂದು ಕೋಟಿ ರೂಪಾಯಿಗಿಂತಲೂ ಹೆಚ್ಚಿನ ಧನಸಹಾಯ ವನ್ನು ಮಾಡುತ್ತಿದ್ದಾರೆ. ಶಿಕ್ಷಣ ಸಂಸ್ಥೆಗಳನ್ನು ಕಟ್ಟುವ ಕಾರ್ಯ ಒಂದು ಹಂತ ಮುಟ್ಟಿದೆ. ಇನ್ನು ಅದನ್ನು ಅಭಿವೃದ್ಧಿಪಡಿಸುವ ಕಾರ್ಯ. ಹಾಗಾಗಿ ಈಗ ಹಿಂದಿನ ಒತ್ತಡಗಳಿಲ್ಲ. ಈಗ ದೈವಿಕತೆಯ ಕಡೆಗೆ ಹೆಚ್ಚು ಗಮನ ಕೊಡುವ ಸಂದರ್ಭವೂ ಬಂದಿದೆ. ಇದು ನಂಬಿಕೆಯಲ್ಲಾದ ಪರಿವರ್ತನೆಯ ಪ್ರಶ್ನೆಯಲ್ಲ. ಸಾಮಾಜಿಕ ಅವಶ್ಯಕತೆಯ ದೃಷ್ಟಿ ಎನ್ನುವುದು ಶ್ರೀ ಕುರುಂಜಿಯವ ಅಭಿಪ್ರಾಯ.

ಮನುಷ್ಯ ಜೀವನದ ಎಲ್ಲಾ ರಂಗಗಳಲ್ಲಿಯು ಶ್ರೀ ಕುರುಂಜಿ ವೆಂಕಟ್ರಮಣ ಗೌಡರು ತಮ್ಮ ಕರ್ತೃತ್ವ ಶಕ್ತಿಯನ್ನು ತೋರಿಸಿಕೊಟ್ಟಿದ್ದಾರೆ. ಅವರ ಯೋಚನೆ ಮತ್ತು ಯೋಜನೆಗಳು ರೂಪು ಗೊಂಡದ್ದು ಈ ಮಣ್ಣಿಗೆ ಅಂಟಿಕೊಂಡಂತೆ. ಒಕ್ಕಲು ಮನೆತನದಿಂದ ಬಂದಿರುವ ಶ್ರೀ ಗೌಡರಲ್ಲಿ ಕಾಣುವ ದಾರ್ಶನಿಕತೆ ಪ್ರಗತಿಪರ ಬದುಕಿಗೆ ಪೂರಕವಾಗಿದೆ. ಇದು ಯಾವುದೇ ಜನಾಂಗದ ಅಭಿವೃದ್ಧಿಗೂ ಮಾದರಿ. ಮಾರ್ಗದರ್ಶಕವಾಗಬಹುದಾದ ವ್ಯಾಪ್ತಿ ಮತ್ತು ಅನನ್ಯತೆ ಉಳ್ಳದ್ದು.

# ಮಲ್ಲಾರದ ಕರ್ಮಜೀವಿ ಮಾಯಿಲಪ್ಪ ಗೌಡ

ಲಲಿತಾಜ ಮಲ್ಲಾರ



ಗೌಡರು ಎಂದರೆ ಭೂಮಿಗೆ ಒಡೆಯರು ಮತ್ತು ಊರಿಗೆ ಯಜಮಾನ ಎಂದರ್ಥ. ಊರಿಗೊಬ್ಬ ಗೌಡ, ನಾಡಿಗೊಬ್ಬ ಅರಸ ಇದು ಕನ್ನಡದ ನಾಣ್ನುಡಿ. ಆದರಿಂದು ಈ ನುಡಿಯ ಅರ್ಥ ವ್ಯರ್ಥವಾಗುತ್ತಿದೆ. ಭೂಮಿಗೆ ಒಡೆಯನಾಗುವುದಕ್ಕಿಂತಲೂ ಸರಕಾರಿ ನೌಕರಿ ಅಥವಾ ನಗರ ಜೀವನವೇ ಪ್ರಾಮುಖ್ಯವಾಗಿ ವ್ಯವಸಾಯ, ಬೇಸಾಯದ ಸ್ಥಿತಿ ಅಧೋಗತಿಗಿಳಿದು, ಆಹಾರ ಸಾಮಗ್ರಿಗಳ ಬೆಲೆ ಗಗನಕ್ಕೇರಿ ನಿರುದ್ಯೋಗಿಗಳ ಸಂಖ್ಯೆಯೂ ಹೆಚ್ಚುತ್ತಿದೆ. ಇದಕ್ಕೆಲ್ಲ ಕಾರಣ ಇಂದಿನ ಶಿಕ್ಷಣದ ರೀತಿ ನೀತಿ. ಮೈ ಬಗ್ಗಿ ದುಡಿಯಲಾರದ ಸೋಮಾರಿತನ ತನ್ನೊಂದಿಗೆ ರಾಷ್ಟ್ರವನ್ನೇ ಬರಡಾಗಿಸುತ್ತಿದೆ.

ಅಕ್ಷರ ಜ್ಞಾನ ಲೋಕಜ್ಞಾನಕ್ಕಾಗಿ ಎಂಬ ಭಾವನೆಯನ್ನು ಬೆಳೆಸಿಕೊಂಡು, ಪೂರ್ವಜರು ಬಿಟ್ಟು ಹೋದ ಪರಂಪರೆ, ಆದರ್ಶಗಳನ್ನು ಮೈಗೂಡಿಸಿಕೊಂಡು ಮಣ್ಣಿನ ಮಕ್ಕಳಾಗಿ, ಭೂಮಿಗೆ ಒಡೆಯರಾಗಿ ಬಾಳುವುದು ಅದೆಷ್ಟು ಚೆನ್ನ. ಇದಕ್ಕೊಂದು ಉದಾಹರಣೆ ಎಂದರೆ ನನ್ನ ಮಾವನವರಾದ ಪೂಜ್ಯ ದಿ. ಮಾಯಿಲಪ್ಪ ಗೌಡರು. (1887-1969) ನಮ್ಮ ಮಲ್ಲಾರ ಕುಟುಂಬಕ್ಕೆ ಆದರ್ಶ ಪ್ರಾಯರಾದ ಸ್ಫೂರ್ತಿದಾತರು.

ಮಾಯಿಲಪ್ಪ ಗೌಡರ ತಂದೆ ಆರ್ಥಿಕ ಮುಗ್ಗಟ್ಟಿಗೆ ಸಿಲುಕಿ ಆ ಕಾಲದಲ್ಲಿ ಅಂದರೆ ಸುಮಾರು 1885ನೇ ಇಸ್ವಿಯಲ್ಲಿ ಊರಲ್ಲಿದ್ದ ಮುಸ್ಲಿಮ್ ವ್ಯಾಪಾರಸ್ಥರಲ್ಲಿ ಸಾಲ ಮಾಡಿ ನಾಲ್ಕು ನೂರು ರೂಪಾಯಿ ಒಳಗಿನ ಮೊತ್ತದ ಸಾಲಕ್ಕೆ ತನ್ನ ಇಡಿಯ ಮಲ್ಲಾರ ಭೂಮಿಯನ್ನು ಅಡವು-ಆರ್ವಾರು ಮಾಡಿಕೊಟ್ಟು ಸ್ವರ್ಗಸ್ಥರಾದಾಗ ಮಾಯಿಲಪ್ಪ ಗೌಡರಿಗೆ ಮೂರು ವರ್ಷ ಪ್ರಾಯ. (ಜನನ: 1887). ಹೆತ್ತವರನ್ನೂ, ಆಸ್ತಿಯನ್ನೂ ಕಳೆದುಕೊಂಡು ಅನಾಥರಾಗಿ ಸೋದರ ಮಾವನ ಮನೆ ಸೇರಿದ ಮಗು ದೊಡ್ಡದಾಗುತ್ತಾ ಅಂದಿನ ದಿನಗಳಲ್ಲಿ ಹಳ್ಳಿಯ ಹುಡುಗರ ವೃತ್ತಿಯಾದ ಜಾನುವಾರು ಮೇಪು, ಮಕ್ಕಳ ಲಾಲನೆ ಪಾಲನೆ, ತರಕಾರಿ ಬೆಳೆಸುವ ಕಾಯಕದಲ್ಲಿ ತನ್ನನ್ನು ತೊಡಗಿಸಿಕೊಂಡು ಅಕ್ಷರ ಜ್ಞಾನವನ್ನೂ ಸಂಪಾದಿಸುತ್ತಿದ್ದರು.

ಬುದ್ಧಿ ಬೆಳೆದಂತೆ ತಾನು ಕಳೆದುಕೊಂಡುದು ತಂದೆ ತಾಯಿಯನ್ನು ಮಾತ್ರವಲ್ಲ ಅವರೊಂದಿಗೆ ಆಸ್ತಿಯೂ ಅನ್ಯರ ಪಾಲಾಗಿದೆ ಎಂಬ ಅರಿವು ಮೂಡಿದಾಗ, ಮಾವನ ಮನೆಯ ಅನ್ನದ ಬಗ್ಗೆ ಅವರು ನಿಯೋಜಿತ ಕೆಲಸದೊಂದಿಗೆ ಆ ಕಾಲದಲ್ಲಿ ಎಲ್ಲರೂ ಪ್ರತ್ಯೇಕವಾಗಿ ಬೆಳೆಸಿ ಸಂಪಾದಿಸುವ ಬೆಳೆಯಾದ ಹೊಗೆ ಸೊಪ್ಪಿನ ಗಿಡಗಳನ್ನು ಬೆಳೆಸಿ ಮಾರಿ ಸ್ವಂತ ಲೆಕ್ಕದಲ್ಲಿ ಹಣವನ್ನು ಕೂಡಿಸಲು ಶುರು ಮಾಡಿ ಬುದ್ಧಿವಂತ ಹುಡುಗನೆಂಬ ಬಿರುದನ್ನೂ ಪಡೆದಿದ್ದರು. ಬಂಜರಾಗಿ ಹಾಳು ಬಿದ್ದಿರುವ ತನ್ನ ಹಿರಿಯರ ಭೂಮಿಯಲ್ಲಿ ವಾಸ್ತವ್ಯ ಹೂಡಿ ಅಭಿವೃದ್ಧಿಗೆ ತರುವ ಕುರಿತು ತೀವ್ರ ಚಿಂತನೆಯಲ್ಲಿ ಹಲವಾರು ರಾತ್ರಿಗಳನ್ನು ನಿದ್ರೆ ಇಲ್ಲದೆ ಕಳೆದಿದ್ದರಂತೆ. ಕಾರಣ ಭೂಮಿಯು ಸಾಹುಕಾರನ ಅಡವಿನ ಸಾಲಕ್ಕೆ ದಾವೆ ದಾಖ್ಲು ಆಗಿ ಆಗಿನ ಪುತ್ತೂರು ಮುನ್ಸಿಫ್ ಕೋರ್ಟಿನ ಸೊತ್ತಾಗಿರುತ್ತದೆಂದು, ಅದರಲ್ಲಿ ಬೇಸಾಯ ಮಾಡಿದವರನ್ನು ಸಾಲದ ವಸೂಲಿ ಬಾಬ್ತು ಬಂಧಿಸಿಕೊಂಡು ಹೋಗುತ್ತಾರೆಂಬ ಸುದ್ದಿಗಳು. ಒಟ್ಟಿನಲ್ಲಿ ಆ ದಿನಗಳಲ್ಲಿ ತರುಣ ಮಾಯಿಲಪ್ಪ ಗೌಡರ ಮಾನಸಿಕ ಸ್ಥಿತಿಯು ನಡು ಸಮುದ್ರದಲ್ಲಿ ಬಿರುಗಾಳಿಗೆ ಸಿಕ್ಕಿ ದಿಕ್ಕು ತಪ್ಪಿದ ನಾವೆಯಂತಾಗಿತ್ತು. ಆದರೂ ಒಂದಲ್ಲ ಒಂದು ದಿನ ತನ್ನ ಪೂರ್ವಜರ ಮಲ್ಲಾರ ಮಣ್ಣಿನ ಹೆಸರನ್ನು ಊರ್ಜಿತಪಡಿಸಬೇಕೆಂಬ ದೃಢ ನಿರ್ಧಾರದಲ್ಲಿ ಪುತ್ತೂರಿಗೆ ಹೋಗಿ ಸಂಬಂಧಪಟ್ಟ ರಿಕಾರ್ಡುಗಳನ್ನೆಲ್ಲ ತಪಾಸಣೆ ನಡೆಸಿದಾಗ ಅಂದಿನ ಕಾಲದ ಒಂದೂವರೆ ಸಾವಿರ ರೂಪಾಯಿ ಹೊಂದಿಸಿಕೊಂಡರೆ ಮಾತ್ರ ಆ ಭೂಮಿಯನ್ನು ಪಡೆಯಲು ಸಾಧ್ಯವೆಂದು ತಿಳಿದುಬಂತು. ಪಿತ್ರಾರ್ಜಿತ ಆಸ್ತಿಯ ಆಶೆಯೇನೋ ತುಂಬಾ ಇತ್ತು. ಆದರೆ ನಿರಾಧಾರಿಯಾದವನಿಗೆ ಅದಕ್ಕೆ ಬೇಕಾದ ಹಣ ಹೊಂದಿಸುವುದೆಂದರೆ...? ಊಹಿಸಲೂ ಅಸಾಧ್ಯ. ಹೀಗೇ ಇದೇ ಚಿಂತೆಯಲ್ಲಿ ಬೇಯುತ್ತಿರುವಾಗ 1908ನೇ ಇಸ್ವಿಯಲ್ಲಿ ನೆರೆ ಗ್ರಾಮದಲ್ಲಿ ರಬ್ಬರ್ ತೋಟದ ಕೆಲಸವು ಯುರೋಪಿಯನ್ ದೊರೆಗಳ ವತಿಯಿಂದ ಪ್ರಾರಂಭಗೊಂಡು ಅಲ್ಲಿ ನಿತ್ಯ ನೂರಾರು ಜನ ಕೆಲಸದವರ ಅಗತ್ಯ ಬಿತ್ತು.

ಹೀಗೆ ಹಣ ಕೂಡಿಸುವ ದಿಕ್ಕನ್ನೇ ನೋಡುತ್ತಿದ್ದ ಮಾಯಿಲಪ್ಪ ಗೌಡರಿಗೆ ನಗದಿ ಸಂಬಳ ಸಿಕ್ಕುವ ಕೆಲಸವೆಂದು ತಿಳಿದು ಹಣದ ಅಡಚಣೆ ಇರುವ ಗುರ್ತಿನ ಜನರನ್ನು ಕರೆದುಕೊಂಡು ಹೋಗಿ ಮೇಸ್ತ್ರಿ ಕೆಲಸಕ್ಕೆ ಸೇರಿಕೊಂಡರು. ಸಂಬಳದ ಜೊತೆಗೆ ಕಮೀಷನ್ ಸಿಗುವಂತಾಯ್ತು. ಒಳ್ಳೆಯ ದಿನಗಳು ಬರಹತ್ತಿದಂತೆ ಯಾವ ದುರಭ್ಯಾಸವೂ ಇಲ್ಲದ ವ್ಯಕ್ತಿಗೆ ಹಣ ಉಳಿತಾಯವಾಗುತ್ತಿತ್ತು. ಅಲ್ಲಿ ಮೇಸ್ತ್ರಿ ಕೆಲಸಕ್ಕೆ ಸೇರಿ ಒಂದೂವರೆ ವರ್ಷದಲ್ಲಿ ಸಾಧಾರಣ ಒಂದು ಮುಕ್ಕಾಲು ಸಾವರ ರೂಪಾಯಿ ಸಂಪಾದಿಸಿಕೊಂಡು ಮರಳಿ ಹುಟ್ಟು ಮಣ್ಣನ್ನು ಪಡೆಯುವ ಪ್ರಯತ್ನಕ್ಕಿಳಿದರು. ಶ್ರೀಯುತ ಕಟ್ಟೆಮನೆ ತಿಮ್ಮಪ್ಪ ಗೌಡರ ಸಹಾಯವನ್ನು ಯಾಚಿಸಿ ಅವರ ಮಾರ್ಗದರ್ಶನದಲ್ಲಿ

ಪುತ್ತೂರು ಕೋರ್ಟು ವ್ಯವಹಾರಕ್ಕೆ ಧುಮುಕಿದರು. ಆ ದಿನಗಳಲ್ಲಿ ಕೋರ್ಟಿಗೆ ಹೋಗಿಬರಲು 45 ಮೈಲು ದೂರದ ನಡಿಗೆಗೆ ನಾಲ್ಕೈದು ದಿನ ಬೇಕಾಗುತ್ತಿತ್ತು. ಕೋರ್ಟು ವ್ಯವಹಾರ ನಿರಂತರ ಎರಡು ವರ್ಷ ನಡೆದು ಮಲ್ಲಾರ ಮೈನರ್-ಸಂತತಿದಾರನ ನೆಲೆಯಲ್ಲಿ ಮಾಯಿಲಪ್ಪ ಗೌಡರ ಹೆಸರಿಗೆ 1911ನೇ ಇಸ್ವಿಯಲ್ಲಿ ಕೋರ್ಟಿನಿಂದ ಬಿಡುಗಡೆಯಾಗಿ ಆಸ್ತಿ ದೊರಕಿತು.

ಆ ನಂತರ ಮಲ್ಲಾರ ಭೂಮಿಯಲ್ಲೇ ಒಂದು ಜೋಪಡಿ ಕಟ್ಟಿಕೊಂಡು ವಾಸ್ತವ್ಯ ಹೂಡಿ ಸ್ವತಃ ಗದ್ದೆ, ತೋಟದ ಕೆಲಸಕ್ಕೆ ಪ್ರಾರಂಭ ಮಾಡಿ ಉತ್ತಮ ಸ್ಥಿತಿಗೆ ಬಂದಾಗ ತನ್ನ ಆಸ್ತಿಯ ಸುತ್ತ ಮುತ್ತಲಿನ ಜಾಗವನ್ನೆಲ್ಲ ಕ್ರಯಕ್ಕೆ ಪಡಕೊಂಡು ಊರಿನಲ್ಲೆ ಉತ್ತಮ ಬೆಳೆಗಾರನೆಂಬ ಹೆಸರನ್ನು ಪಡೆದರು. ಯಾವ ದುರ್ಬುದ್ಧಿಗಳೂ ಇಲ್ಲದ ಉತ್ತಮ ಕಾರ್ಯವಂತನಾದುದರಿಂದ ಊರ ಸೆರೆಯೂರ ಯಾವುದೇ ವಾದ ವಿವಾದಗಳು ತೀರ್ಮಾನಗಳಿಗೆ ಇವರ ಮಧ್ಯಸ್ಥಿಕೆಯು ಅನಿವಾರ್ಯವೆಂಬ ಹೆಸರು ಗಳಿಸಿದರು. ಊರಿನ ಜನಪ್ರಿಯ ಮುಖಂಡನಾದುದರಿಂದ ಸರಕಾರದಿಂದಾಗಲೀ, ಸಮಾಜ ಸುಧಾರಕರು-ವ-ರಾಜಕೀಯ ಧುರೀಣರು ಯಾರೇ ಬಂದರೂ ಮಾಯಿಲಪ್ಪ ಗೌಡರ ಮನೆಯ ಆತಿಥ್ಯ ಸ್ವೀಕರಿಸಿ ಅವರ ಸಹಕಾರ ಸಹಾಯ ಪಡೆಯದೆ ಹೋಗುತ್ತಿರಲಿಲ್ಲ. ಮಲ್ಲಾರ ಮನೆ ಅನ್ನದಾನದ ಮನೆಯೆಂದು ಹೆಸರು ಪಡೆಯಿತು. ಆಗಿನ ಕಾಲದ ಸಮಾಜದ ಏಕೈಕ ಸಂಸ್ಥೆಯಾದ ದ.ಕ. ಮತ್ತು ಕೊಡಗು ಜಿಲ್ಲಾ ವಿದ್ಯಾವರ್ಧಕ ಸಂಘದ ಆಡಳಿತ ಸದಸ್ಯನಾಗಿ ಹತ್ತಾರು ವರ್ಷ ಕಾರ್ಯನಿರ್ವಹಿಸಿರುತ್ತಾರೆ. ಪುತ್ತೂರು ಗೌಡ ವಿದ್ಯಾರ್ಥಿ ಭವನದಲ್ಲಿ ಆಗಿನ ಕಾಲದ ಒಂದೂವರೆ ಸಾವಿರ ರೂಪಾಯಿ ವೆಚ್ಚದ ಬಚ್ಚಲು ಕೋಣೆಯನ್ನು ತಮ್ಮ ಸ್ವಂತ ಖರ್ಚಿನಿಂದ ಕಟ್ಟಿಸಿ ಸಮಾಜಕ್ಕೆ ದಾನ ಮಾಡಿರುತ್ತಾರೆ. ಬಲಗೈಯಲ್ಲಿ ಕೊಟ್ಟದ್ದು ಎಡಗೈಗೆ ತಿಳಿಯಬಾರದು ಎಂಬ ತತ್ವವನ್ನು ಹೊಂದಿದ ಮಾಯಿಲಪ್ಪ ಗೌಡರು ಎಲೆಯ ಮರೆಯ ಕಾಯಿಯಂತೆ ಸಮಾಜದ ದುರ್ಬಲರಿಗೆ ತನ್ನ ಕೈಲಾದ ರೀತಿಯಲ್ಲಿ ಸಹಕಾರ ನೀಡುತ್ತಿದ್ದರು. ಇಂಥಹ ಒಂದು ದೃಢ ನಿರ್ಧಾರ, ಆತ್ಮ ವಿಶ್ವಾಸವನ್ನು ಇಂದಿನ ನವ ಪೀಳಿಗೆ ಗಳಿಸಿಕೊಂಡು, ಪುಸ್ತಕದ ಓದು ಜ್ಞಾನಾರ್ಜನೆಗಾಗಿ, ಬರೀ ಉದ್ಯೋಗದ ದಾಹಕ್ಕೆ, ಅಹಂಕಾರಕ್ಕೆ ಅಲ್ಲ ಎಂಬ ತಿಳುವಳಿಕೆಯನ್ನೂ ಪಡೆಯಬೇಕು. ನ್ಯಾಯವಾದ ರೀತಿಯ ಯಾವ ಕೆಲಸವೇ ಆಗಲಿ, ಅದರಿಂದ ಸಾಧನೆಯ ಸೋಪಾನವನ್ನು ಏರೋಣ. ನಮ್ಮ ಗೌಡ ಜನಾಂಗದ ಮುಂದಿನ ಪ್ರಜೆಗಳಿಗೆ ಮಲ್ಲಾರ ಮಾಯಿಲಪ್ಪ ಗೌಡರು ನಡೆದ ಜೀವನದ ಹಾದಿಯನ್ನು ಇತರರಿಗೆ ಪ್ರೇರಣೆಯಾಗಲಿ ಎಂದು ಸಂಕ್ಷಿಪ್ತವಾಗಿ ಇಲ್ಲಿ ಪ್ರಸ್ತುತ ಪಡಿಸಿದ್ದೇನೆ. ●

# ನಾಟಿವೈದ್ಯ ಸೋಮಪ್ಪ ಗೌಡ

✍ ಕಾಣೆಚ್ಚಾರು ಸಂಕಪ್ಪ ಗೌಡ



ಹೆಸರು : ಶ್ರೀಸೋಮಪ್ಪ ಗೌಡ, ಉರಿಮಜಲು ಇಡ್ಕಿದು ಗ್ರಾಮ, ನಾಟಿವೈದ್ಯರು
ತಂದೆ : ಶ್ರೀ ಚೆನುಮ ಗೌಡ
ತಾಯಿ : ಶ್ರೀಮತಿ ಕುಂಞಕ್ಕ
ಪ್ರಾಯ : ಸುಮಾರು 76 ವರ್ಷ

ಇವರು ಅಂಧ್ರವಾಯು,ವಾತ, ಹಳದಿರೋಗ (ಜಾಂಡಿಸ್) ಗ್ಯಾಸ್ಟ್ರಿಕ್,ಹೊಟ್ಟೆನೋವು, ವಿಷಕಡಿತ, ಹುಚ್ಚು ನಾಯಿ ಕಡಿತ, ಮಕ್ಕಳ ಕಿವಿಸೋರುವಿಕೆ ಇವೇ ಮೊದಲಾದ ಕಾಯಿಲೆಗಳಿಗಲ್ಲದೆ, ಜಾನುವಾರುಗಳ ಬೇರೆಬೇರೆ ರೀತಿಯ ಕಾಯಿಲೆಗಳಿಗೂ, ಔಷಧಿ ನೀಡುತ್ತಿದ್ದಾರೆ.ಊರ,ಹಾಗೂ ಪರವೂರ ಅನೇಕ ಜನರು ಇವರಿಂದ ಆರೋಗ್ಯ ಲಾಭ ಪಡೆದಿರುತ್ತಾರೆ.

ವಿಟ್ಲದಲ್ಲಿ ಗೌಡ ಸಮ್ಮೇಳನದ ದಿನದಂದು 1.12.02 ರಂದು ಸನ್ಮಾನಿಸಲಾಯಿತು. ●

# ಜನಪದ ವೈದ್ಯ ಮುಚ್ಚಾರು ನಾರಾಯಣ ಗೌಡ

✍ ಶಶಿಪ್ರಭಾ ವೈ. ಗೌಡ



ಬೆಳ್ತಂಗಡಿ ತಾಲೂಕು ಪುದುವೆಟ್ಟು ಗ್ರಾಮದ ಮುಚ್ಚಾರು ಕಿಟ್ಟಗೌಡ ಮತ್ತು ಮೋಹಿನಿ ದಂಪತಿಗಳ ಮಗನಾದ ನಾರಾಯಣ ಗೌಡರು ಆಕಸ್ಮಿಕವಾಗಿ ಜನಪದ ವೈದ್ಯಕ್ಷೇತ್ರಕ್ಕೆ ಬಂದವರು. ಅವರ ಹಿರಿಯರಾರು ಜನಪದ ವೈದ್ಯರಾಗಿರಲಿಲ್ಲ. ಒಂದು ಸಂದರ್ಭದಲ್ಲಿ ಬಿದ್ದು ಕೈಮುರಿತಕ್ಕೊಳಗಾದಾಗ ಓರ್ವ ಜನಪದ ವೈದ್ಯರಲ್ಲಿಗೆ ಹೋಗಿ ಮದ್ದು ಮಾಡಿಸಿ ಅದರಲ್ಲಿ ಸಂಪೂರ್ಣ ಗುಣಮುಖ ಕಂಡಾಗ ಈ ಕ್ಷೇತ್ರದ ಬಗ್ಗೆ ಅವರಿಗೆ ಆಸಕ್ತಿ ಮೂಡಿತು. ತಮ್ಮ ಪರಿಸರದಲ್ಲಿ ಯಾವುದೇ ಜನಪದ ವೈದ್ಯರಿಲ್ಲದ ಕಾರಣ ಅದನ್ನು ಕಲಿಯಬೇಕು, ಆ ಮೂಲಕ ಜನಸೇವೆ ಮಾಡಬೇಕು ಎಂಬ ನಿರ್ಧಾರಕ್ಕೆ ಬಂದರು. ಆ ಸಂದರ್ಭದಲ್ಲಿ ಅವರಿಗೆ ಸಿಕ್ಕವರು ಶಿಶಿಲ ಗ್ರಾಮದ ಅಡ್ಡೊಲೆಯ ನಿವಾಸಿ ಚೆನ್ನಪ್ಪ ಗೌಡರು. ಚೆನ್ನಪ್ಪ ಗೌಡರು ವಿಷವೈದ್ಯರು ಹಾಗೂ ಇತರ ಕಾಯಿಲೆಗಳಿಗೂ ಮದ್ದು ಕೊಡುತ್ತಿದ್ದರು. ಇವರ ಮೂಲಕ ನಾರಾಯಣ ಗೌಡರು ಜನಪದ ವೈದ್ಯ ಪದ್ಧತಿಯನ್ನು ಮತ್ತು ಮಂತ್ರವನ್ನು ಕಲಿತರು.

ಕೃಷಿಕರಾದ ಮುಚ್ಚಾರು ನಾರಾಯಣ ಗೌಡರು ಸುಮಾರು 15 ವರ್ಷಗಳಿಂದ ಜನಪದ ವೈದ್ಯ ವೃತ್ತಿಯನ್ನು ಯಾವುದೇ ಪ್ರತಿಫಲಾಪೇಕ್ಷೆ ಇಲ್ಲದೆ ಮಾಡುತ್ತಾ ಬಂದಿದ್ದಾರೆ. ಆರಂಭದಲ್ಲಿ ಊರಲ್ಲಿ ನಾಗರಹಾವು ಕಚ್ಚಿದ ಮಹಿಳೆಯೋರ್ವರಿಗೆ ಮದ್ದು ಕೊಟ್ಟರು. ಪ್ರಥಮ ಪ್ರಯೋಗವೇ ಫಲ ಕೊಟ್ಟಾಗ ತೃಪ್ತಿಯುಂಟಾಯಿತು. ಜನಗಳಿಗೂ ನಂಬಿಕೆ ಬಂತು. ಇವರು ಊರಿನ ಜನರಿಗಲ್ಲದೆ ದೂರದ ಊರಿನ ಜನರು ಬಂದು ಹಾವಿನ ಕಡಿತಕ್ಕೆ ಇವರಿಂದ ಚಿಕಿತ್ಸೆಯನ್ನು ಪಡೆಯುತ್ತಾರೆ. ಕೆಲವು ಉದಾಹರಣೆಗಳನ್ನು ಕೊಡುವುದಾದರೆ. ಮಂಗಳೂರಿನ ಬೈಕಂಪಾಡಿಯ ಶ್ರೀಮತಿ ಪ್ರೇಮ ಎಂಬವರಿಗೆ ಹಾವು ಕಚ್ಚಿ 2 ತಿಂಗಳು ಮಂಗಳೂರಿನ ಆಸ್ಪತ್ರೆಯಲ್ಲಿ ಸಾವಿರಾರು ರೂಪಾಯಿ ಖರ್ಚು ಮಾಡಿ ಗುಣ ಆಗದಿದ್ದಾಗ ಯಾರಿಂದಲೋ ಇವರ ವಿಳಾಸ ಪಡೆದು ಇವರ ಮನೆಗೆ ಬಂದು ಚಿಕಿತ್ಸೆ ಪಡೆದು ಗುಣಮುಖರಾಗಿದ್ದಾರೆ.

ಅದೇ ರೀತಿ ಸುಳ್ಯಕ್ಕೆ ತಮ್ಮ ಸಂಬಂಧಿಕರ ಮನೆಗೆ ಹೋದಾಗ ಅವರ ಮನೆಯ ಹತ್ತಿರದ ಕೇಶವ ನಾಯ್ಕ ಎಂಬವರಿಗೆ ಹಾವು ಕಡಿದು ಆಸ್ಪತ್ರೆಯಲ್ಲಿದ್ದಾರೆ ಎಂಬ ವಿಚಾರವನ್ನು ಸಂಬಂಧಿಕರು ತಿಳಿಸಿದಾಗ, ಇವರು ಆಸ್ಪತ್ರೆಗೆ ಹಾವು ಕಡಿದ ವ್ಯಕ್ತಿಯನ್ನು ನೋಡಿ ನೀವು ಮನೆಗೆ ಬರುವುದಾದರೆ ಒಂದು ವಾರದಲ್ಲಿ ನಾನು ಗುಣಪಡಿಸುತ್ತೇನೆ ಎಂದರು. ಕೂಡಲೇ ಆಸ್ಪತ್ರೆಯಿಂದ ಬಿಡುಗಡೆ ಹೊಂದಿ ಇವರ ಮನೆಗೆ ಬಂದು ಮದ್ದು ಮಾಡಿಸಿ ಗುಣಮುಖರಾಗಿದ್ದಾರೆ. ಮಲೆಯಾಳಿ ವ್ಯಕ್ತಿ ಒಬ್ಬರಿಗೆ ನಾಗರ ಹಾವುಕಚ್ಚಿ ಸ್ಮೃತಿ ತಪ್ಪಿ ಹೋಗಿತ್ತು. ಆ ವ್ಯಕ್ತಿಯನ್ನು ಇವರ ಮನೆಗೆ ಕರೆ ತಂದರು. ಗೌಡರು ಆತನನ್ನು ನೋಡಿ ಆತನ ತಲೆಯ ನೆತ್ತಿಯನ್ನು ಸೀಳಿ ಮದ್ದು ಇಟ್ಟು, ಸೊಪ್ಪು ಹಾಕಿದರು. ಐದೇ ನಿಮಿಷದಲ್ಲಿ ಆ ವ್ಯಕ್ತಿಗೆ ಸ್ಮೃತಿ ಬಂತು. ಆಮೇಲೆ ನೀರು ಮಂತ್ರಿಸಿ ಆತನಿಗೆ ಕುಡಿಸಿದಾಗ ಎದ್ದು ಕುಳಿತ. ಜ್ವಲಂತ ಘಟನೆ ನನ್ನ ಕಣ್ಣ ಮುಂದಿದೆ. ಹೀಗೆ ಹಲವಾರು ಹಾವು ಕಡಿತಕ್ಕೊಳಗಾದ ಜನರನ್ನು ಬದುಕಿಸಿದ ವಿಷ ವೈದ್ಯ ನಾರಾಯಣ ಗೌಡರು ಅಲ್ಲದೆ ಸರ್ಪಸುತ್ತು, ಸರ್ಪಕೆಂದಳಿ, ಕೆಂಪು ಹಾಗೂ ವಿವಿಧ ರೀತಿಯ ಬಾಪು (ಬಾವು)ಗಳು ಸುರುವಾಗಿ ಆಸ್ಪತ್ರೆಗೆ ಹೋಗಿ ಗುಣವಾಗದೆ ಇವರಲ್ಲಿಗೆ ಬಂದು ಮದ್ದು ಮಾಡಿಸಿ ಗುಣಮುಖವಾಗಿದ್ದಾರೆ.

ಇವರು ಮುಖ್ಯವಾಗಿ ವಿಷವೈದ್ಯರು, ಯಾವುದೇ ವಿಷದ ಹಾವು ಕಚ್ಚಿದರೂ ಇವರು ಚಿಕಿತ್ಸೆ ಮಾಡುತ್ತಾರೆ. ಅಲ್ಲದೆ, ಕೆಂದಳಿ, ಕೆಂಪು, ಬಿಳಿ ಸೆರಗು, ವಿವಿಧ ರೀತಿಯ ಬಾಪು (ಬಾವು)ಗಳಿಗೂ ಮದ್ದು ಕೊಡುತ್ತಾರೆ. ಸುಟ್ಟ ಗಾಯ ಮತ್ತು ಉಳುಕು ನೋವುಗಳಿಗೂ ಎಣ್ಣೆ ಕೊಡುತ್ತಾರೆ. ಇವರ ಪ್ರಕಾರ ಯಾವುದೇ ಹಳ್ಳಿಮದ್ದನ್ನು ಮಾಡುವುದಾದರೂ ಪಥ್ಯ ಸರಿಯಾಗಿ ಮಾಡಬೇಕು. ಅದು ಮಾಡದಿದ್ದರೆ ಹಳ್ಳಿ ಮದ್ದನ್ನು ಮಾಡಬೇಕಾಗಿಯೇ ಇಲ್ಲ ಎನ್ನುತ್ತಾರೆ. ಇವರು 2000 ಇಸವಿಯಲ್ಲಿ ನಡೆದ ನಾಟಿ ವೈದ್ಯರ ಸಮ್ಮೇಳನದಲ್ಲಿ ಭಾಗವಹಿಸಿದ್ದಾರೆ.

ಗಾದೆ

ಕೇರೆ ತಿಂಬ ಊರಿಗೆ ಹೋದರೆ ನಡು ತುಂಡು ತಿನ್ನೊಕು.
ಗಂಡಸರ ಕೈಲಿ ಕೂಸು ನಿಲ್ಲಿಕಿಲೆ ಹೆಂಗ್‌ಸರ ಬಾಯಿಲಿ ಮಾತು ನಿಲ್ಲಕಿಲೆ.

# ಭಯ ನಿವಾರಣೆ ಕೆಂಚಮ್ಮ

ಪಿ.ಎಂ. ಆನಂದ ಗೌಡ



ಶ್ರೀಮತಿ ಕೆಂಚಮ್ಮನವರು ಸುಳ್ಯ ತಾಲೂಕು ಯೇನಕಲ್ಲು ಗ್ರಾಮದ ನೆಕ್ರಾಜೆ ಮನೆಯ ಶ್ರೀಯುತ ದುಗ್ಗಣ್ಣ ಗೌಡರ ಧರ್ಮ ಪತ್ನಿಯಾಗಿರುತ್ತಾರೆ. ಹಾವು ಕಡಿತದಿಂದ ಉಂಟಾಗುವ ವಿಷಭಯಕ್ಕೆ ವಿಷ ಇಳಿಸುವ ಸರಿಯಾದ ಔಷಧ ಕೊಡುವ ಪ್ರಸಿದ್ಧ ನಾಟಿ ವೈದ್ಯೆಯಾಗಿರುತ್ತಾರೆ.

ಶ್ರೀಮತಿ ಕೆಂಚಮ್ಮನವರು 1935ರಲ್ಲಿ ಸುಳ್ಯ ತಾಲೂಕು ಬಳ್ಪಗ್ರಾಮದ ಎಣ್ಣೆಮಜಲು ಹೂವಯ್ಯ ಯಾನೆ ಬೋಳ ಗೌಡ ತಾಯಿ ಕಾವೇರಮ್ಮ ಎಂಬವರ ಪ್ರಥಮ ಪುತ್ರಿಯಾಗಿ ಜನಿಸಿದರು. ಇವರ ಅಜ್ಜಿ ಪರಮೇಶ್ವರಿಯವರ ತಂದೆ ಮನೆಯಿಂದ ಬಳುವಳಿಯಾಗಿ ಬಂದ ನಾಟಿ ವೈದ್ಯ ಪದ್ಧತಿಯು ಪರಮೇಶ್ವರಿಯಮ್ಮನವರಿಂದ ಪ್ರಚಾರಗೊಂಡಿತು. ಅವರು ಪ್ರಸಿದ್ಧ ನಾಟಿವೈದ್ಯೆಯಾಗಿದ್ದರು. ಹಾವಿನ ವಿಷಕ್ಕೆ ಔಷಧಿಕೊಡುವುದಲ್ಲದೆ, ಸಣ್ಣ ಮಕ್ಕಳಿಗೆ ಬರುವ ಕಾಯಿಲೆಗಳಿಗೂ, ಸಾಮಾನ್ಯವಾಗಿ ಬರುವ ಕಾಯಿಲೆಗಳಾದ ಸರ್ಪಸುತ್ತು, ಕೆಂದಾಳೆ, ಕೆಂಪು, ಡೆಂಜಿ (ಏಡಿ) ಬಾಪು, ಪೆರಂದೋಳು ಕಡಿತ (giant spider) ಗಂಟಲು ನೋವು ಅಲ್ಲದೆ ಹಲವು ಕೆಂಪು ರೋಗಗಳಿಗೆ ಔಷಧಿ ಕೊಡುವವರಾಗಿದ್ದರು. ಅಲ್ಲದೇ ಮಂತ್ರ ಪ್ರಯೋಗದ ಮೂಲಕವೂ ಉಪಶಮನ ಮಾಡುತ್ತಿದ್ದರು. ಇವರ ಆರಾಧ್ಯ ದೈವ ಮನೆಯ ಕಲ್ಲುರ್ಟಿ. ತನ್ನ ಈ ವಿದ್ಯೆಯನ್ನು ಮಗ ಹೂವಯ್ಯ ಗೌಡರಿಗೆ ಕಲಿಸಿಕೊಟ್ಟರು. ಶ್ರೀಮತಿ ಕೆಂಚಮ್ಮನವರ ತಂದೆಯವರು ನಾಟಿ ವೈದ್ಯರಾಗಿದ್ದು, ಔಷಧಿ ಸಂಗ್ರಹಿಸುವಲ್ಲಿ ಮಗಳಾದ ಕೆಂಚಮ್ಮನವರೊಡನೆ ನಾರು ಬೇರುಗಳ ಗುರುತು ತಿಳಿಸಿ ತರಿಸಿಕೊಳ್ಳುತ್ತಿದ್ದರು. ಒಂದೊಮ್ಮೆ ವಿಷವೈದ್ಯೆ ಪರಮೇಶ್ವರಿಯವರು ತನ್ನ ತವರು ಮನೆಗೆ ಹೋದ ಸಂದರ್ಭ, ಹೂವಯ್ಯ ಗೌಡರು ವಿಷ ಕಡಿತಕ್ಕೊಳಗಾದಾಗ ಮಗಳು ಕೆಂಚಮ್ಮನವರು ತಂದೆಯವರಿಗೆ ಔಷಧಿ ಕೊಟ್ಟು, ತಕ್ಷಣ ಉಪಶಮನ ಮಾಡಿದ ಪರಿಣಾಮವಾಗಿ ಗುಣಮುಖರಾದ ತಂದೆ ಹಾಗೂ ಅಜ್ಜಿ ಶ್ರೀಮತಿ ಕೆಂಚಮ್ಮನವರಿಗೆ ಔಷಧಿಗಳ ಪೂರ್ಣ ಮಾಹಿತಿ ತಿಳಿಸಿ ಆಶೀರ್ವದಿಸಿದರು. ಮತ್ತೆ ಇವರು ನಾಟಿ ವೈದ್ಯೆಯಾದರು.

ತಮ್ಮ 19ನೇ ವಯಸ್ಸಿನಲ್ಲಿ ಸುಳ್ಯ ತಾಲೂಕು ಯೇನೆಕಲ್ಲು ಗ್ರಾಮದ ನೆಕ್ರಾಜೆ ದುಗ್ಗಣ್ಣ ಗೌಡರೊಡನೆ ವಿವಾಹವಾಗಿ, ಕೃಷಿಕಾಯಕ ಹಾಗೂ ಗೃಹಕೃತ್ಯವನ್ನು ಅವಲಂಬಿಸುವುದರೊಂದಿಗೆ, ಔಷಧಿ ಕೊಡುವುದನ್ನು ನಿರ್ವಹಿಸಿದರು. ಹಾವು ಕಡಿತಕ್ಕೊಳಗಾದ ಸಾವಿರಾರು ಜನರು ಇವರಿಂದ ಔಷಧಿ ಪಡೆದು ಗುಣಮುಖರಾಗಿರುವುದು ನಿತ್ಯ ಸತ್ಯವಾಗಿದೆ. ಹಾವು ಕಡಿತಕ್ಕೊಳಗಾದ ವ್ಯಕ್ತಿಗಳಿಗೆ ಇವರ ಮನೆ ಮಂದಿಯೆಲ್ಲಾ ಸೇರಿ ಉಪಶಮನಗೊಳಿಸಿದ ಸಂದರ್ಭಗಳು ಬಹಳಷ್ಟಿವೆ. ಪ್ರಕೃತ ಯೇನೆಕಲ್ಲಿನಲ್ಲಿಯೇ ಕನ್ನಡಿ ಹಾವಿನ ಕಡಿತಕ್ಕೊಳಗಾಗಿ ಹೆಣ್ಣು ಮಗಳೊಬ್ಬಳು ತೀರಿಕೊಂಡಳು ಎಂಬ ಅಭಿಪ್ರಾಯಕ್ಕೆ ಬಂದ ಮನೆಮಂದಿ ಅಂತಿಮಕ್ರಿಯೆ ತೀರ್ಮಾನಕ್ಕೆ ಬರುವ ಮುನ್ನ ಇವರ ಮಾತಿನಂತೆ ಬಲಾತ್ಕಾರವಾಗಿ ಔಷಧಿ ಕುಡಿಸಿ ಉಪಶಮನಗೊಳಿಸಿದ ಹುಡುಗಿಯು ಇಂದು ಜೀವಂತವಾಗಿದ್ದಾಳೆ. ಅಲ್ಲದೆ ಪಟ್ಟೆ ಮಂಡಲವೆಂಬ ಭೀಕರ ವಿಷವುಳ್ಳ ಹಾವು ಕಡಿದಾತ ಮೂರ್ಛೆಗೊಳಗಾಗಿ ಪ್ರಾಣಾಂತಿಕ ಸ್ಥಿತಿಯಲ್ಲಿದ್ದವನು ಬದುಕಿ ಉಳಿದಿದ್ದಾನೆ. ಸುಬ್ರಹ್ಮಣ್ಯ ದೇವಾಲಯದ ಸಮೀಪದಲ್ಲಿದ್ದ ಬೆಕ್ಕಿನ ಮರಿಯನ್ನು ಕಬಳಿಸುತ್ತಿದ್ದ ನಾಗರ ಹಾವಿನ ಬಾಯಿಯಿಂದ ಬೆಕ್ಕಿನ ಮರಿಯನ್ನು ಬಿಡಿಸಿದಾತನಿಗೆ ಅದೇ ನಾಗರ ಹಾವು ಕಡಿತದಿಂದ ಪ್ರಾಣಾಂತಿಕವಾಗಿದ್ದವನು, ಇವರ ಔಷಧಿ ಪ್ರಯೋಗದಿಂದ ಬದುಕಿ ಉಳಿದಿದ್ದಾನೆ. ಅಲ್ಲದೆ ಹಳೆಯ ವಿಷ ನೋವುಗಳಿಂದ ಗುಣಮುಖರಾದವರು ಬಹಳಷ್ಟಿದ್ದಾರೆ. ವಿಷ ಕಡಿತಕ್ಕೆ ಒಳಗಾದ ವ್ಯಕ್ತಿಗೆ ಅತೀ ಬಿಸಿಯುಳ್ಳ ಪಾನೀಯ ಮತ್ತು ಅತೀ ತಣ್ಣಗಿನ ಪಾನೀಯ ಕೊಡಕೂಡದು. ತುಂಬಾ ಸೇವಿಸಬಾರದು. ನಿದ್ರೆ ಮಾಡಿದರೆ ವಿಷವು ದೇಹವೆಲ್ಲಾ ಪಸರಿಸುವುದು. ವಿಷ ಕಡಿದ ಶರೀರದ ಭಾಗದಿಂದ ಮೇಲ್ಮುಖಕ್ಕೆ ರಕ್ತಸಂಚಾರ ಸ್ಥಿತಿಯನ್ನು ನಿಯಂತ್ರಿಸುವುದಕ್ಕೆ ಬೈಹುಲ್ಲು/ಬಟ್ಟೆಯಿಂದ ತಯಾರಿಸಿ ಹಗ್ಗದಿಂದ ಕಟ್ಟ ಹಾಕುವ ಕ್ರಮವಿದೆ. ಆದಷ್ಟು ಬೇಗನೆ ಚಿಕಿತ್ಸೆಗೆ ಒಳಪಡಿಸುವುದರಿಂದ ಪ್ರಾಣಾಪಾಯವಿಲ್ಲ ಎಂದು ಪ್ರಥಮ ಚಿಕಿತ್ಸೆಯ ಸಲಹೆಯನ್ನು ಇವರು ನೀಡುತ್ತಾರೆ.

ತುಂಬು ಸಂಸಾರಿಗಳಾಗಿದ್ದ ಇವರು ವೈಯುಕ್ತಿಕವಾಗಿ ಶ್ರೀಮಂತರಲ್ಲವಾದರೂ ತಮ್ಮನ್ನು ನಂಬಿ ವಿಷದ ಔಷದಿಗಳಿಗಾಗಿ ಬಂದ ರೋಗಿಗಳಿಗೆ ಉಪಶಮನ ಮಾಡಿ ಅವರನ್ನು ಬದುಕಿಸಿದ್ದುದು ಸತ್ಯವಾಗಿದೆ. ಹೀಗೆಯೇ ಹಲವು ಜನರ ಜೀವ ರಕ್ಷಕರಾಗಿ ಇವರು ಮಾಡುವ ಸಮಾಜ ಸೇವೆ ಶ್ಲಾಘನೀಯ ವಿಷಯವಾಗಿದೆ. ಈಗ ಇವರ ನಾಟಿವೈದ್ಯ ಕಾಯಕವನ್ನು ತಮ್ಮ ಮಗನಾದ ಶ್ರೀ ನಾಗೇಶಗೌಡರಿಗೆ ಕಲಿಸಿ ಕರಗತಗೊಳಿಸಿದ್ದಾರೆ. ಇದುವರೆಗೆ ಯಾರಿಂದಲೂ ಕೇಳಿ ಸಂಭಾವನೆ ಪಡೆಯದ ಇವರು ಅಭಿಮಾನಿಗಳು ಒತ್ತಾಯ ಪೂರ್ವಕವಾಗಿ ಕೊಟ್ಟ ಹಣವನ್ನು ಸ್ವೀಕರಿಸುವರು. ಪತಿ ಹಾಗೂ ಮಕ್ಕಳೊಡನೆ ತುಂಬು ಸಂಸಾರದೊಂದಿಗೆ ತಮ್ಮ 67ನೇ ವರ್ಷದಲ್ಲಿ ವಿಶ್ರಮಿಸುತ್ತಿದ್ದಾರೆ. ಗೌಡ ಸಮಾಜದಲ್ಲಿ ಇವರೊಬ್ಬ ಶ್ರೇಷ್ಠ ನಾಟಿವೈದ್ಯೆ ಎಂಬುದರಲ್ಲಿ ಎರಡು ಮಾತಿಲ್ಲ.

ಶ್ರೀಮತಿ ಕೆಂಚಮ್ಮ, ನಾಗೇಶ ಗೌಡ, ನೆಕ್ರಾ ಮನೆ, ಯೇನೆಕಲ್ಲು ಗ್ರಾಮ ಮತ್ತು ಅಂಚೆ, ಸುಳ್ಯ ತಾಲೂಕು ದ.ಕ. 574 238

